# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮೇ ೧೪, ೨೦೧೫ (ವೈಶಾಖ ೨೪, ಶಕ ವರ್ಷ ೧೯೩೭)<br>Bengaluru, Thursday, May 14, 2015 (Vaishakha 24, Shaka Varsha 1937) | ಸಂಚಿಕೆ ೨೦<br>Issue 20 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಂದಾಯ ಸಚಿವಾಲಯ**

**68ನೇ ಪ್ರಕರಣದ (5)ನೇ ಉಪ-ಪ್ರಕರಣದ ಮೇರೆಗಿನ ಘೋಷಣೆ-ನಿಯಮ 96**

**ಅಧಿಸೂಚನೆ**

**ಸಂಖ್ಯೆ : ಆರ್‌ಡಿ 105 ಎಲ್‌ಜಿಎಂ 2014, ಬೆಂಗಳೂರು, ದಿನಾಂಕ : 16-12-2014.**

**ನಮೂನೆ 29**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ 5ನೇ ಉಪ-ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಹೊರಡಿಸಿದ ದಿನಾಂಕ : 20-03-2008 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಎಲ್‌ಎನ್‌ಡಿಪಿಆರ್ : 488/06-07, ದಿನಾಂಕ : 10-03-2008 ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ರಸ್ತೆಯ/ಬೀದಿಯ/ಗಲ್ಲಿಯ/ದಾರಿಯ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಮೈಸೂರು ಜಿಲ್ಲೆಯ ಜಿಲ್ಲಾಧಿಕಾರಿಗಳ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ ಸಾರ್ವಜನಿಕ ರಸ್ತೆಯ ಬೀದಿಯ/ಗಲ್ಲಿಯ/ದಾರಿಯ ಅಂಥ ಭಾಗದಲ್ಲಿನ ಅಥವಾ ಅದರ ಮೇಲಣ ಸಾರ್ವಜನಿಕ ಹಾಗೂ ವ್ಯಕ್ತಿಗಳ ಎಲ್ಲ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ರಸ್ತೆಯ/ಬೀದಿಯ/ಗಲ್ಲಿಯ/ದಾರಿಯ ಭಾಗವು ಇರುವ ಗ್ರಾಮ | ದೂರ ಗ್ರಾಮ |
| ತಾಲ್ಲೂಕು | ಮೈಸೂರು |
| ಜಿಲ್ಲೆ | ಮೈಸೂರು |
| ರಸ್ತೆಯ/ಬೀದಿಯ/ಗಲ್ಲಿಯ/ದಾರಿಯ ಭಾಗದ ವರ್ಣನೆ | ಹದ್ದಿಗೆ ಹಿಡಿದಿರುವ ಸರ್ಕಾರಿ ಓಣಿ |
| ರಸ್ತೆಯ/ಬೀದಿಯ/ಗಲ್ಲಿಯ/ದಾರಿಯ ಭಾಗದ ಸರಿಸುಮಾರು ವಿಸ್ತೀರ್ಣ | 1-20 |
| ಮೇರೆಗಳು | |
| ಪೂರ್ವ | ಸರ್ಕಾರಿ ಡಾಂಬರ್ ರಸ್ತೆ |
| ಪಶ್ಚಿಮ | ಸರ್ವೆ ನಂ. 30ರ ಜಮೀನು |
| ಉತ್ತರ | ಸರ್ವೆ ನಂ. 27ರ ಜಮೀನು |
| ದಕ್ಷಿಣ | ಸರ್ವೆ ನಂ. 21 (ಕೋಳಿ ಫಾರಂ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಉದಯ ಆರ್. ನಾಯಕ್**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ-2).

**P.R. 275**
**SC-50**

## DIRECTORATE OF ECONOMICS AND STATISTICS, BANGALORE-1

**Consumer Price Index Numbers for Industrial Workers**

**No. DES 24 PWX 2014, dated 02-02-2015**

**State : Karnataka** **Base : 1987-88=100** **Month : December**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:** | | | | | | | | | | | |
| | (a) Cereals & Cereals Products | 963 | 941 | 1110 | 820 | 935 | 982 | 955 | 1056 | 806 | 1112 | 998 |
| | (b) Pulses & Pulses Products | 722 | 815 | 821 | 923 | 748 | 795 | 834 | 821 | 856 | 781 | 804 |
| | (c) Oil & Fats | 468 | 412 | 461 | 402 | 417 | 435 | 405 | 494 | 440 | 409 | 430 |
| | (d) Meat Fish & Eggs | 941 | 1114 | 1149 | 1023 | 1162 | 1045 | 953 | 1079 | 728 | 1213 | 1123 |
| | (e) Milk & Milk Products | 757 | 708 | 775 | 879 | 762 | 784 | 758 | 797 | 684 | 776 | 766 |
| | (f) Condiments & Spices | 625 | 782 | 1005 | 933 | 619 | 651 | 906 | 865 | 728 | 758 | 789 |
| | (g) Vegetables & Fruits | 822 | 952 | 1062 | 997 | 709 | 800 | 1057 | 1061 | 839 | 631 | 1270 |
| | (h) Other Food | 615 | 948 | 911 | 925 | 733 | 660 | 778 | 765 | 809 | 671 | 645 |
| | **FOOD GROUP INDEX** | **799** | **871** | **965** | **861** | **794** | **802** | **861** | **935** | **763** | **883** | **873** |
| II. | Pan, Supari, Tobacco & Intoxicants | 841 | 1094 | 972 | 956 | 766 | 1073 | 808 | 864 | 618 | 811 | 1018 |
| III. | Fuel & Light | 685 | 628 | 709 | 784 | 743 | 790 | 718 | 760 | 606 | 975 | 526 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 367 | 575 | 511 | 519 | 404 | 464 | 636 | 749 | 364 | 730 | 235 |
| VI. | **Miscellaneous:** | | | | | | | | | | | |
| | (a) Medical Care | 813 | 966 | 741 | 550 | 433 | 421 | 713 | 694 | 465 | 543 | 374 |
| | (b) Education, Recreation & Amusement | 900 | 793 | 1242 | 544 | 1004 | 1148 | 854 | 641 | 1162 | 1585 | 1114 |
| | (c) Transport & Communication | 844 | 833 | 770 | 788 | 868 | 798 | 818 | 1114 | 920 | 777 | 775 |
| | (d) Personal Care & effects | 444 | 562 | 635 | 625 | 754 | 502 | 541 | 553 | 547 | 543 | 492 |
| | (e) Others | 662 | 573 | 713 | 901 | 509 | 512 | 551 | 750 | 423 | 706 | 469 |
| | Miscellaneous Group | 681 | 697 | 796 | 674 | 710 | 657 | 662 | 686 | 682 | 767 | 605 |
| | **GENERAL INDEX** | **659** | **710** | **774** | **722** | **646** | **663** | **720** | **774** | **641** | **766** | **597** |
| | To convert to Base 1960 Multiply by Linking Factor. | **7.39** | **9.19** | **8.27** | **-** | **8.26** | **8.56** | **9.25** | **7.92** | **9.31** | **-** | **-** |

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು

**Government of India**

**Ministry of Labour**

**Labour Bureau**

**NO. 112/1 (KTK) /2014 CPI**

**Consumer Price Index Numbers for Industrial Workers (Base : 2001=100)**

**Month : December, 2014**

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| **FOOD :** | | | | | |
| (a) Cereals & Cereals Products | 273 | 298 | 279 | 268 | 291 |
| (b) Pulses & Products | 275 | 274 | 274 | 274 | 257 |
| (c) Oils & Fats | 237 | 263 | 192 | 288 | 214 |
| (d) Meat, Fish & Eggs | 367 | 340 | 367 | 320 | 333 |
| (e) Milk & Products | 313 | 276 | 252 | 266 | 290 |
| (f) Condiments & Spices | 247 | 312 | 282 | 283 | 311 |
| (g) Vegetables & Fruits | 380 | 326 | 339 | 336 | 346 |
| (h) Other Food | 272 | 298 | 276 | 280 | 276 |
| **FOOD GROUP** | 290 | 300 | 281 | 287 | 294 |
| Pan, Supari, Tobacco & Intoxicants | 265 | 273 | 292 | 238 | 312 |
| Fuel & Light | 212 | 185 | 210 | 350 | 214 |
| Housing index | 242 | 226 | 354 | 102 | 276 |
| Clothing, Bedding & Footwear | 170 | 162 | 171 | 190 | 181 |
| Miscellaneous | | | | | |
| (a) Medical care | 204 | 253 | 217 | 235 | 192 |
| (b) Education, Recreation and Amusement | 168 | 182 | 183 | 332 | 135 |
| (c) Transport and Communication | 319 | 340 | 327 | 303 | 270 |
| (d) Personal Care & Effects | 209 | 290 | 253 | 246 | 238 |
| (e) Others | 227 | 232 | 238 | 214 | 288 |
| Miscellaneous Group | 223 | 268 | 244 | 270 | 216 |
| **GENERAL INDEX** | 257 | 262 | 272 | 262 | 262 |

**For ECONOMIC OFFICER**

ಜಂಟಿ ನಿರ್ದೇಶಕರು,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಬೆಂಗಳೂರು

**P.R. 295**
**SC 05**

**ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಅರಮನೆ ರಸ್ತೆ, ಬೆಂಗಳೂರು**

**ಸಂಖ್ಯೆ: ಡಿಟಿಇ 08 ಡಿಇಕ್ಯೂ(1) 2013, ದಿನಾಂಕ : 29/01/2015**

**ವಿಷಯ :** ಶ್ರೀ ವೆಂಕಟೇಶ್, ಸ್ಕ್ಯಾವೆಂಜರ್, ಸರ್ಕಾರಿ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆ, ಹೆಸರಘಟ್ಟ, ಬೆಂಗಳೂರು ಇವರ ಅನಧಿಕೃತ ಗೈರು ಹಾಜರಿ ಕುರಿತು ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಪ್ರಿನ್ಸಿಪಾಲರು ಶ್ರೀ ವೆಂಕಟೇಶ್, ಸ್ಕ್ಯಾವೆಂಜರ್ ಇವರಿಗೆ ಜಾರಿ ಮಾಡಲಾದ ತಿಳುವಳಿಕೆ ಪತ್ರ ದಿನಾಂಕ: 21/03/2012, 21/06/2012, 20/05/2013, 20/07/2013, 24/07/2013.
2. ಪ್ರಿನ್ಸಿಪಾಲರಿಗೆ ಶ್ರೀ.ವೆಂಕಟೇಶ್, ಸ್ಕ್ಯಾವೆಂಜರ್ ಇವರು ಸಲ್ಲಿಸಿರುವ ಮನವಿ ಪತ್ರ ದಿನಾಂಕ: 23/01/2008, 22/09/2009.
3. ಪ್ರಿನ್ಸಿಪಾಲರು ನಿರ್ದೇಶಕರಿಗೆ ಬರೆದ ಪತ್ರ ದಿನಾಂಕ: 20/10/2009, 04/11/2010, 10/08/2013, 29/04/2014, 10/08/2013, 19/01/2015.
4. ನಿರ್ದೇಶಕರಿಂದ ಕಾರಣ ಕೇಳುವ ನೋಟೀಸ್ ದಿನಾಂಕ: 30/08/2013
5. ದೋಷಾರೋಪಣ ಪಟ್ಟಿ ದಿನಾಂಕ: 03/02/2014.
6. ವಿಚಾರಣಾಧಿಕಾರಿಗಳ ನೇಮಕಾತಿ ದಿನಾಂಕ: 09/05/2014.
7. ವಿಚಾರಣಾಧಿಕಾರಿಗಳು ಅಂತಿಮ ವರದಿ ಸಲ್ಲಿಸಿದ ದಿನಾಂಕ: 21/07/2014.
8. ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ: 26/09/2014.
9. ಶ್ರೀ ವೆಂಕಟೇಶ್, ಸ್ಕ್ಯಾವೆಂಜರ್ ಇವರ ಸಮಜಾಯಿಷಿ ದಿನಾಂಕ: 07/11/2014.

**ಪ್ರಸ್ತಾವನೆ :**

ಸರ್ಕಾರಿ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆ, ಹೆಸರುಘಟ್ಟ, ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ **ಶ್ರೀ ವೆಂಕಟೇಶ್, ಸ್ಕ್ಯಾವೆಂಜರ್** ಇವರು ದಿ: 15/05/2013 ರಿಂದ 25/07/2013ರವರೆಗೆ ಹಾಗೂ ದಿನಾಂಕ: 02/06/2013 ರಿಂದ ಇಲ್ಲಿಯವರೆಗೂ ದೀರ್ಘಾವಧಿ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಈ ಹಿಂದೆಯೂ ಸಹ ಇವರು ದೈನಂದಿನ ಕಛೇರಿ ಕೆಲಸಗಳಿಗೆ ಆಗಾಗ ಗೈರುಹಾಜರಾಗುವುದನ್ನು ರೂಢಿಸಿಕೊಂಡಿರುತ್ತಾರೆ. ಇವರ ಅನಧಿಕೃತ ಗೈರುಹಾಜರಿ ಹಾಗೂ ಕರ್ತವ್ಯ ನಿರ್ಲಕ್ಷ್ಯತೆ ಬಗ್ಗೆ ಸಂಸ್ಥೆಯ ಪ್ರಿನ್ಸಿಪಾಲರು ಬರೆದ ಪತ್ರದ ಅನುಸಾರ ಸದರಿಯವರಿಗೆ ಇಲಾಖಾ ವತಿಯಿಂದ ಕಾರಣ ಕೇಳುವ ನೋಟೀಸು ಜಾರಿ ಮಾಡಲಾಗಿ, ಕಾರಣ ಕೇಳುವ ನೋಟೀಸಿಗೆ ಸಮಜಾಯಿಷಿಯನ್ನು ದಿನಾಂಕ: 20/09/2014 ರಂದು ಸಲ್ಲಿಸಿರುತ್ತಾರೆ. ಸದರಿ ಸಮಜಾಯಿಷಿಯನ್ನು ಪರಿಶೀಲಿಸಿದ ಶಿಸ್ತು ಪ್ರಾಧಿಕಾರವು ಒಪ್ಪದೇ ಗೈರುಹಾಜರಿಯ ಸತ್ಯಾಸತ್ಯತೆಯನ್ನು ಅರಿಯಲು ತೀರ್ಮಾನಿಸಿ ದಿನಾಂಕ 30/08/2013ರಲ್ಲಿ ಸದರಿಯವರ ಅನಧಿಕೃತ ಗೈರುಹಾಜರಿ ವಿರುದ್ಧ ದೋಷಾರೋಪಣ ಪಟ್ಟಿ ಜಾರಿಗೊಳಿಸಲಾಗಿತ್ತು. ಸದರಿಯವರು ತಮ್ಮ ಲಿಖಿತ ಸಮಜಾಯಿಷಿಯನ್ನು ದಿನಾಂಕ: 20/09/2013ರಲ್ಲಿ ಸಲ್ಲಿಸಿರುತ್ತಾರೆ. ಸದರಿಯವರ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರವು ಅವರ ವಿರುದ್ಧ ಆರೋಪಗಳ ಬಗ್ಗೆ ಮತ್ತು ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966ರ ಸಾಮಾನ್ಯ ನಿಯಮ 1) (i), (ii), (iii) ನ್ನು ಉಲ್ಲಂಘಿಸಿದ ಕಾರಣಕ್ಕಾಗಿ ಅನಧಿಕೃತ ಗೈರು ಹಾಜರಿಯ ಅವಧಿಗೆ ಪೂರ್ಣಾವಧಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ದಿನಾಂಕ: 09/05/2014ರಂದು ಶ್ರೀ ಎಂ.ಜಿ. ಹಿರೇಮಠ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಯಿತು. ಅದರಂತೆ ವಿಚಾರಣಾಧಿಕಾರಿಗಳು ಸದರಿಯವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ದಿನಾಂಕ: 21/07/2014ರಂದು ವಿಚಾರಣೆಯ ಅಂತಿಮ ವರದಿಯನ್ನು ಸಲ್ಲಿಸಿರುತ್ತಾರೆ.

ಸದರಿ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಆರೋಪಿತರ ವಿರುದ್ಧ ಮಾಡಿದ ಆರೋಪಗಳನ್ನು ಅವರ ಪ್ರಾರಂಭಿಕ ಹೇಳಿಕೆಯನ್ನು ಸಲ್ಲಿಸಿ ಆರೋಪವನ್ನು ಒಪ್ಪಿಕೊಂಡಿರುತ್ತಾರೆ. ಆಪಾದಿತರು ಅವರ ವಿರುದ್ಧ ಮಾಡಿದ ಆರೋಪವನ್ನು ಒಪ್ಪಿಕೊಂಡಿದ್ದರಿಂದ ಅವರ ವಿರುದ್ಧ ಮಾಡಿದ ಆರೋಪವು ಸಾಬೀತಾಗಿರುತ್ತದೆಂದು ನಿರ್ಧರಿಸಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಆಪಾದಿತರು ಅವರ ವಿರುದ್ಧ ಮಾಡಿದ ಆರೋಪವನ್ನು ಒಪ್ಪಿಕೊಂಡಿದ್ದರಿಂದ ಮಂಡನಾಧಿಕಾರಿಗಳು ಆರೋಪವನ್ನು ಸಾಬೀತು ಪಡಿಸಲು ಯಾವುದೇ ಸಾಕ್ಷಿದಾರರನ್ನು ವಿಚಾರಿಸಿರುವುದಿಲ್ಲ ಮತ್ತು ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ. ಮಂಡನಾಧಿಕಾರಿಗಳು ಆರೋಪ ಸಾಬೀತಾಗಿದೆಯೆಂದು ವರದಿ ಸಲ್ಲಿಸಲು ಕೋರಿರುತ್ತಾರೆ. ಆಪಾದಿತರು ಸಹ ತಮ್ಮ ಲಿಖಿತ ಪ್ರತಿವಾದವನ್ನು ಸಲ್ಲಿಸಿ ಮೌಖಿಕ ವಾದ ಮಂಡಿಸಿದರು.

ಈ ಪ್ರಕರಣದಲ್ಲಿ ಆರೋಪಿತರಿಂದ ದುರ್ನಡತೆ ಎಸಗಲ್ಪಟ್ಟಿರುವುದನ್ನು ಯಾವುದೇ ಸಂದೇಹಕ್ಕೆ ಆಸ್ಪದ ಇಲ್ಲದಂತೆ ಖಚಿತಪಡಿಸಿದೆ. ಈ ಅಂಶಗಳನ್ನು ಸಮರ್ಥವಾಗಿ ಅಲ್ಲಗಳೆಯುವಂತಹ ಯಾವುದೇ ಮೌಖಿಕ ಅಂಶಗಳನ್ನು ಸಹ ಆರೋಪಿತರು ನಿರೂಪಿಸಿರುವುದಿಲ್ಲ. ವಿಚಾರಣೆಯು ಸಮರ್ಪಕವಾಗಿ ನಡೆದು ಆರೋಪಿತರಿಗೆ ತಮ್ಮ ವಾದವನ್ನು ಮಂಡಿಸಲು ವಿಫುಲ ಅವಕಾಶವನ್ನು ನೀಡಲಾಗಿದೆ. ಈ ಕಛೇರಿಯ ಎರಡನೇ ಕಾರಣ ಕೇಳುವ ನೋಟಿಸ್ ಸಂ: ಡಿಟಿಇ 08 ಡಿಇಕ್ಯೂ(1)2013, ದಿನಾಂಕ:26/09/2014ರಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಲಗತ್ತಿಸಿ, ಸದರಿಯವರ ವಿರುದ್ಧ ಹೊರಿಸಲಾದ ಆರೋಪವು ಸಾಬೀತಾಗಿದೆಯೆಂದು ಸಲ್ಲಿಸಿರುವ ವರದಿಯನ್ನು ಅಂಗೀಕರಿಸಿ ಏಕೆ ಸೂಕ್ತ ದಂಡನೆ ವಿಧಿಸಬಾರದು ಎಂಬುದರ ಬಗ್ಗೆ ನೋಟಿಸ್ ತಲುಪಿದ 30 ದಿವಸಗಳೊಳಗಾಗಿ ಲಿಖಿತ ಸಮಜಾಯಿಷಿ ಸಲ್ಲಿಸಲು ತಿಳಿಸಲಾಗಿತ್ತು.

ಆದರೆ ಸದರಿ 2ನೇ ಕಾರಣ ಕೇಳುವ ನೋಟಿಸನ್ನು ಸ್ವೀಕರಿಸಿ, ದಿನಾಂಕ: 07/11/20014ರಂದು ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಸದರಿಯವರ ಸಮಜಾಯಿಷಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ಶ್ರೀ ವೆಂಕಟೇಶ್, ಸ್ಕ್ಯಾವೆಂಜರ್, ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ನಿರ್ದಿಷ್ಟವಾದ ಮತ್ತು ಸ್ಪಷ್ಟವಾದ ಹಾಗೂ ಪುಷ್ಠೀಕರಿಸುವಂತಹ ಯಾವುದೇ ಕಾರಣಗಳನ್ನು ಅಥವಾ ದಾಖಲೆಗಳನ್ನಾಗಲೀ ಸಲ್ಲಿಸಿರುವುದಿಲ್ಲ ಹಾಗೂ ಸದರಿಯವರ ಸೇವಾವಧಿಯನ್ನು ಗಮನಿಸಲಾಗಿ ಈ ಹಿಂದೆಯೂ ಸಹ ಹಲವಾರು ಬಾರಿ ಗೈರು ಹಾಜರಾದ ಹಿನ್ನೆಲೆಯಲ್ಲಿ ಪ್ರಿನ್ಸಿಪಾಲರ ಹಂತದಲ್ಲಿ ಜ್ಞಾಪನಗಳನ್ನು ಜಾರಿ ಮಾಡಲಾಗಿದ್ದರೂ ಸಹ ಅವರ ವರ್ತನೆಯಲ್ಲಿ ಯಾವುದೇ ಬದಲಾವಣೆ ಆಗಿರುವುದಿಲ್ಲ. ಮತ್ತು ಇವರು ಅನಧಿಕೃತ ಗೈರು ಹಾಜರಿಯ ಹವ್ಯಾಸವನ್ನೇ ಬಳಸಿಕೊಂಡಿರುವುದರಿಂದ ಆರೋಪಿತರು ಸಲ್ಲಿಸಿದ ಸಮಜಾಯಿಷಿಯನ್ನು ಒಪ್ಪದೆ ಅವರ ವಿರುದ್ಧದ ವಿಚಾರಣಾ ವರದಿಯನ್ನು ಅಂಗೀಕರಿಸಿ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಶಿಸ್ತು ಪ್ರಾಧಿಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ನಿರ್ದೇಶಕರ ಆದೇಶ ಸಂಖ್ಯೆ: ಡಿಟಿಇ 08 ಡಿಇಕ್ಯೂ(1)2013, ಬೆಂಗಳೂರು ದಿನಾಂಕ : 29ನೇ ಜನವರಿ 2015**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿ 1957ರ ನಿಯಮ 8(vi) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆ, ಹೆಸರುಘಟ್ಟ, ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ವೆಂಕಟೇಶ್, ಸ್ಕ್ಯಾವೆಂಜರ್, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ **ಸರ್ಕಾರಿ ಸೇವೆಯಿಂದ ಈ ಮೂಲಕ ಕಡ್ಡಾಯ ನಿವೃತ್ತಿಗೊಳಿಸಿದೆ.**

ಸದರಿಯವರ ಗೈರು ಹಾಜರಾದ ಅವಧಿಯನ್ನು ಕೆಲಸ ಮಾಡದ ದಿನಗಳೆಂದು (Dies none) ಎಂದು ಪರಿಗಣಿಸಿ ಆದೇಶಿಸಲಾಗಿದೆ.

**ನಿರ್ದೇಶಕರು**

ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ,

ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು.

**P.R. 296**

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ : ಕಂಇ 63 ಎಲ್ಆರ್ಎಂ 2013, ಬೆಂಗಳೂರು, ದಿನಾಂಕ : 29–01–2015

ಲೈಫ್‌ಲೈನ್ ಫೀಡ್ಸ್ (ಇಂಡಿಯಾ) ಪ್ರೈ ಲಿ., ಚಿಕ್ಕಮಗಳೂರು ಇವರಿಗೆ ಚಿಕ್ಕಮಗಳೂರು ತಾಲ್ಲೂಕು ಹಳೇಲಕ್ಯಾ ಗ್ರಾಮದ ಸ.ನಂ. 116/1 ರಲ್ಲಿ 5.00 ಎಕರೆ, ಕ್ಯಾತನಬೀಡು ಗ್ರಾಮದ ಸ.ನಂ. 131 ರಲ್ಲಿ 4.08 ಎಕರೆ, 132/1 ರಲ್ಲಿ 1.00 ಎಕರೆ, 132/2 ರಲ್ಲಿ 1.00 ಎಕರೆ, 132/3 ರಲ್ಲಿ 1.00 ಎಕರೆ 134/1 ರಲ್ಲಿ 2.10 ಎಕರೆ, 134/2 ರಲ್ಲಿ 2.10 ಎಕರೆ ಹಾಗೂ ಸ.ನಂ. 135 ರಲ್ಲಿ 4.38 ಎಕರೆ ಜುಮ್ಲಾ 21.26 ಎಕರೆ ಜಮೀನನ್ನು ಹಾಗೂ ಕಡೂರು ತಾಲ್ಲೂಕು ಶಕುನಿಪುರ ಗ್ರಾಮದಲ್ಲಿ 10.09 ಎಕರೆ ಒಟ್ಟು 31.35 ಎಕರೆ ಕೃಷಿ ಜಮೀನನ್ನು ಕೋಳಿ ಸಾಕಾಣಿಕೆ ಮತ್ತು ಅದರ ಉತ್ಪನ್ನಗಳ ಸ್ಥಾಪನೆಗೆ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 ರಡಿ ವಿನಾಯಿತಿ ನೀಡಲು ಕೋರಿ ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್ಆರ್ಎಫ್ : 55/56/2012–13, ದಿನಾಂಕ : 17–10–2013 ಮತ್ತು 11–07–2014 ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974ರ ನಿಯಮ 38–ಬಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ ಕಲಂ 109(1)ರಡಿ ಮೇಲ್ಕಂಡ ಒಟ್ಟು 31–35 ಎಕರೆ ಕೃಷಿ ಜಮೀನನ್ನು ಖರೀದಿಸಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ :–

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
3. ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದಲ್ಲ.
4. ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.
5. ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.
6. ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ./ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.
7. ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.
8. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 297**

**SC-20**

## ನಿರ್ದೇಶಕರ ಕಛೇರಿ, ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ, 20ನೇ ಮಹಡಿ, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು–1

### ತಿದ್ದುಪಡಿ ಅಧಿಸೂಚನೆ

### ಸಂಖ್ಯೆ : ಅಂ.ಸ.ನಿ/ಹೈ.ಪ್ರ.ನೇ/ಸಿಆರ್–65(2)/2013–14, ದಿನಾಂಕ : 28–01–2015

**ವಿಷಯ :** ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013ರಡಿಯಲ್ಲಿ ಅಲ್ಪಸಂಖ್ಯಾತರ ನಿರ್ದೇಶನಾಲಯದ ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವ ಕಾಲೇಜುಗಳ ವಿವಿಧ ವೃಂದಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದವರಿಗೆ ಗ್ರೂಪ್ ಬಿ, ಸಿ ಮತ್ತು ಡಿ ಹುದ್ದೆಗಳಿಗೆ ಕ್ರಮವಾಗಿ ಶೇ. 75, 80 ಮತ್ತು 85 ರಷ್ಟು ಹುದ್ದೆಗಳನ್ನು ಗುರುತಿಸುವ ಕುರಿತು.

ಕರ್ನಾಟಕ ರಾಜ್ಯಪತ್ರ ಭಾಗ–3ರಲ್ಲಿ ಹೊರಡಿಸಲಾದ ಅಧಿಸೂಚನೆ ಸಂಖ್ಯೆ : ಅಂಸನಿ/ಹೈ.ಪ್ರ.ನೇ/ಸಿಆರ್–65/2013–14, ದಿನಾಂಕ : 22–11–2014ರ ಅಧಿಸೂಚನೆಯ ಅನುಬಂಧದಲ್ಲಿ ಈ ಕೆಳಕಂಡಂತೆ ಕೆಲವು ಬದಲಾವಣೆಗಳನ್ನು ಮಾಡಲಾಗಿದ್ದು ಅನುಬಂಧವನ್ನು ಈ ಮುಂದಿನಂತೆ ತಿದ್ದಿ ಓದಿಕೊಳ್ಳತಕ್ಕದ್ದು.

**ದಿನಾಂಕ : 22–11–2014 ರಂದು ಹೊರಡಿಸಲಾದ ಅಧಿಸೂಚನೆಯ ಅನುಬಂಧ**

**ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವ ಕಾಲೇಜುಗಳಲ್ಲಿ ಮಂಜೂರಾದ ಹುದ್ದೆಗಳು**

| ಕ್ರ ಸಂ. | ಹುದ್ದೆ | ವೇತನ ಶ್ರೇಣಿ (ರೂ. ಗಳಲ್ಲಿ) | ಮಂಜೂರಾದ ವೃಂದ ಬಲ (ವೃಂದ ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ) | ಮುಂಬಡ್ತಿ | ನೇರ ನೇಮಕಾತಿ | ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಗುರುತಿಸಲಾದ ಹುದ್ದೆಗಳು | | |
|---|---|---|---|---|---|---|---|---|
| | | | | | | ಮುಂಬಡ್ತಿ | ನೇ. ನೇ | ಒಟ್ಟು |
| **1** | **2** | **3** | **4** | **5** | | **6** | **7** | **8** |
| | | | **ಗ್ರೂಪ್ 'ಬ' ವೃಂದ ಶೇ 75** | | | | | |
| 1. | ಕನ್ನಡ ಭಾಷಾ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ | | 0 | 3 | 3 |
| | | | | – | 3 | | | |
| 2. | ಆಂಗ್ಲ ಭಾಷಾ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ) | | 0 | 3 | 3 |
| | | | | – | 3 | | | |
| 3. | ಭೌತಶಾಸ್ತ್ರ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ) | | 0 | 3 | 3 |
| | | | | – | 3 | | | |
| 4. | ರಸಾಯನಶಾಸ್ತ್ರ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ) | | 0 | 3 | 3 |
| | | | | – | 3 | | | |
| 5. | ಗಣಿತಶಾಸ್ತ್ರ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ) | | 0 | 3 | 3 |
| | | | | – | 3 | | | |
| 6. | ಜೀವಶಾಸ್ತ್ರ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ) | | 0 | 3 | 3 |
| | | | | – | 3 | | | |
| 7. | ಗಣಕಯಂತ್ರ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ) | | 0 | 3 | 3 |
| | | | | – | 3 | | | |
| | **ಒಟ್ಟು** | | **21** | – | **21** | **0** | **21** | **21** |
| | | | **ಗ್ರೂಪ್ 'ಸಿ' ವೃಂದ ಶೇ. 80** | | | | | |
| 8. | ನಿಲಯಪಾಲಕರು | 20000–36300 | 3 | (ಶೇ. 100 ನೇ ನೇ) | | 0 | 3 | 3 |
| | | | | – | 3 | | | |
| 9. | ಪ್ರಥಮ ದರ್ಜೆ ಗಣಕಯಂತ್ರ ಸಹಾಯಕರು | 14500–26700 | 3 | (ಶೇ. 100 ನೇ ನೇ) | | 0 | 3 | 3 |
| | | | | – | 3 | | | |
| | **ಒಟ್ಟು** | – | **6** | – | **6** | | **6** | **6** |
| | | | **ಗ್ರೂಪ್ 'ಡಿ' ವೃಂದ ಶೇ. 85** | | | | | |
| 10. | ಅಡುಗೆಯವರು | 10400–16400 | 12 | (ಶೇ. 100 ನೇ ನೇ) | | 0 | 11 | 11 |
| | | | | – | 12 | | | |

| | | | | | | | | |
|---|---|---|---|---|---|---|---|---|
| 11. | ಅಡುಗೆ ಸಹಾಯಕರು | 9600–14550 | 9 | (ಶೇ. 100 ನೇ ನೇ)<br>– | 9 | 0 | 8 | 8 |
| 12. | ಡಿ ವೃಂದ | 9600–14550 | 9 | (ಶೇ. 100 ನೇ ನೇ)<br>– | 9 | 0 | 8 | 8 |
| | **ಒಟ್ಟು** | – | **30** | – | **30** | **0** | **27** | **27** |

**ತಿದ್ದುಪಡಿ ಅಧಿಸೂಚನೆಯ ಅನುಬಂಧ**

**ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವ ಕಾಲೇಜುಗಳಲ್ಲಿ ಮಂಜೂರಾದ ಹುದ್ದೆಗಳು**

| ಕ್ರ ಸಂ. | ಹುದ್ದೆ | ವೇತನ ಶ್ರೇಣಿ (ರೂ. ಗಳಲ್ಲಿ) | ಮಂಜೂರಾದ ವೃಂದ ಬಲ (ವೃಂದ ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ) | ಮುಂಬಡ್ತಿ | ನೇರ ನೇಮಕಾತಿ | ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಗುರುತಿಸಲಾದ ಹುದ್ದೆಗಳು | | |
|---|---|---|---|---|---|---|---|---|
| | | | | | | ಮುಂಬಡ್ತಿ | ನೇ. ನೇ | ಒಟ್ಟು |
| **1** | **2** | **3** | **4** | **5** | | **6** | **7** | **8** |
| | **ಗ್ರೂಪ್ 'ಬಿ' ವೃಂದ ಶೇ 75** | | | | | | | |
| 1. | ಕನ್ನಡ ಭಾಷಾ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ<br>– | 3 | 0 | 2 | 2 |
| 2. | ಆಂಗ್ಲ ಭಾಷಾ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ)<br>– | 3 | 0 | 2 | 2 |
| 3. | ಭೌತಶಾಸ್ತ್ರ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ)<br>– | 3 | 0 | 2 | 2 |
| 4. | ರಸಾಯನಶಾಸ್ತ್ರ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ)<br>– | 3 | 0 | 2 | 2 |
| 5. | ಗಣಿತಶಾಸ್ತ್ರ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ)<br>– | 3 | 0 | 2 | 2 |
| 6. | ಜೀವಶಾಸ್ತ್ರ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ)<br>– | 3 | 0 | 2 | 2 |
| 7. | ಗಣಕಯಂತ್ರ ಉಪನ್ಯಾಸಕರು | 22800–43200 | 3 | (ಶೇ. 100 ನೇ ನೇ)<br>– | 3 | 0 | 2 | 2 |
| | **ಒಟ್ಟು** | | **21** | – | **21** | **0** | **14** | **14** |
| | **ಗ್ರೂಪ್ 'ಸಿ' ವೃಂದ ಶೇ. 80** | | | | | | | |
| 8. | ನಿಲಯಪಾಲಕರು | 20000–36300 | 3 | (ಶೇ. 100 ನೇ ನೇ)<br>– | 3 | 0 | 2 | 2 |
| 9. | ಪ್ರಥಮ ದರ್ಜೆ ಗಣಕಯಂತ್ರ ಸಹಾಯಕರು | 14500–26700 | 3 | (ಶೇ. 100 ನೇ ನೇ)<br>– | 3 | 0 | 2 | 2 |
| | **ಒಟ್ಟು** | – | **6** | – | **6** | | **4** | **4** |
| | **ಗ್ರೂಪ್ 'ಡಿ' ವೃಂದ ಶೇ. 85** | | | | | | | |
| 10. | ಅಡುಗೆಯವರು | 10400–16400 | 12 | (ಶೇ. 100 ನೇ ನೇ)<br>– | 12 | 0 | 11 | 11 |
| 11. | ಅಡುಗೆ ಸಹಾಯಕರು | 9600–14550 | 9 | (ಶೇ. 100 ನೇ ನೇ)<br>– | 9 | 0 | 8 | 8 |

| | | | | | | | | |
|---|---|---|---|---|---|---|---|---|
| 12. | ಡಿ ವೃಂದ | 9600–14550 | 9 | (ಶೇ. 100 ನೇ ನೇ) | | 0 | 8 | 8 |
| | | | | – | 9 | | | |
| | ಒಟ್ಟು | – | **30** | – | **30** | **0** | **27** | **27** |

P.R. 298
SC-1000

**ಅಕ್ರಂ ಪಾಷ**
ನಿರ್ದೇಶಕರು,
ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು.

## ಪೊಲೀಸ್ ಕಮೀಷನ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ.

## ಅಧಿಸೂಚನೆ

### ಸಂಖ್ಯೆ : ಸಿಬಿ/22/ಅಧಿ/ಡಿಸಿಪಿ/ಸಂ.ಪೂ/2014, ಬೆಂಗಳೂರು, ದಿನಾಂಕ : 30–12–2014

ಬೆಂಗಳೂರು ನಗರ–ಹಲಸೂರುಗೇಟ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಗೆ ಸೇರಿದ ಕಬ್ಬನ್‌ಪೇಟೆ ಮುಖ್ಯ ರಸ್ತೆಯು ಅವೆನ್ಯೂ ರಸ್ತೆ ಮತ್ತು ಎನ್.ಆರ್. ರಸ್ತೆಗಳಿಗೆ ಸಂಪರ್ಕ ಕಲ್ಪಿಸುವ ಪ್ರಮುಖ ರಸ್ತೆಯಾಗಿರುತ್ತದೆ. ಈ ರಸ್ತೆಯು ಕೇವಲ 30 ಅಡಿ ಅಗಲ ಮತ್ತು 1 ಕಿ.ಮೀ. ಉದ್ದವಿರುವ ದ್ವಿಮುಖ ಸಂಚಾರ ರಸ್ತೆಯಾಗಿರುತ್ತದೆ. ಸದರಿ ಮಾರ್ಗದ ಮೂಲಕ ಚಿಕ್ಕಪೇಟೆ, ಅವೆನ್ಯೂ ರಸ್ತೆ, ಕಬ್ಬನ್‌ಪೇಟೆ, ನಗರತ್‌ಪೇಟೆ, ಗಾಣಿಗರಪೇಟೆ ಮತ್ತು ಸುತ್ತಮುತ್ತಲ ವಾಣಿಜ್ಯ ಮತ್ತು ವಸತಿ ಪ್ರದೇಶಗಳಿಗೆ ಬಂದು–ಹೋಗುವ ಎಲ್ಲಾ ಮಾದರಿಯ ವಾಹನಗಳೂ ಸಹ ಇದೇ ರಸ್ತೆಯ ಮೂಲಕ ಸಂಚರಿಸುತ್ತಿರುವ ಕಾರಣ ವಾಹನ ಸಂಚಾರ ದಟ್ಟಣೆ ನಿರಂತರವಾಗಿ ಅಧಿಕವಾಗಿರುತ್ತದೆ. ಇದರ ಜೊತೆಗೆ ಮೇಲ್ಕಂಡ ಪ್ರದೇಶಗಳಲ್ಲಿರುವ ವಾಣಿಜ್ಯ ಮಳಿಗೆಗಳಿಗೆ ಬರುವ ಸಾರ್ವಜನಿಕರು ತಮ್ಮ ವಾಹನಗಳನ್ನು ಬಹುತೇಕ ವಾಸದ ಮನೆಗಳಿಂದ ಕೂಡಿರುವ ಹಾಗೂ ಸಮರ್ಪಕ ಪಾದಚಾರಿ ರಸ್ತೆಯನ್ನು ಹೊಂದಿಲ್ಲದ ಕಬ್ಬನ್‌ಪೇಟೆ ರಸ್ತೆಯ ಎರಡೂ ಬದಿಗಳಲ್ಲಿ ನಿಲುಗಡೆ ಮಾಡುತ್ತಿರುವುದರಿಂದ, ಈ ರಸ್ತೆಯಲ್ಲಿ ಸಂಚರಿಸುವ ಇತರೆ ಸಾರ್ವಜನಿಕ ವಾಹನಗಳ ಸುಗಮ ಸಂಚರಣೆಗೆ ಮತ್ತು ಪಾದಚಾರಿಗಳ ಸುರಕ್ಷಿತ ಓಡಾಟಕ್ಕೆ ತೀವ್ರ ಅಡಚಣೆ/ಅನಾನುಕೂಲ ಉಂಟಾಗುತ್ತಿದೆ. ಈ ಬಗ್ಗೆ ಸ್ಥಳೀಯ ಸಾರ್ವಜನಿಕರಿಂದಲೂ ಸಹ ಅನೇಕ ದೂರುಗಳು ಆಗಿಂದಾಗ್ಗೆ ಬರುತ್ತಿರುತ್ತವೆ. ಈ ಸಂಚಾರ ಸಮಸ್ಯೆಯನ್ನು ಶಾಶ್ವತವಾಗಿ ಪರಿಹರಿಸುವ ಸಲುವಾಗಿ, ಕಬ್ಬನ್‌ಪೇಟೆ ರಸ್ತೆಯಲ್ಲಿ ಪಶ್ಚಿಮ ದಿಕ್ಕಿನ ಅವೆನ್ಯೂ ರಸ್ತೆ ಜಂಕ್ಷನ್‌ನಿಂದ ಪೂರ್ವ ದಿಕ್ಕಿನ ಎನ್.ಆರ್. ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಎರಡೂ ಕಡೆ ಎಲ್ಲಾ ಮಾದರಿಯ ವಾಹನಗಳ ನಿಲುಗಡೆಯನ್ನು ನಿಷೇಧಿಸುವುದು ಅತ್ಯವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್, 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಂ.ಎನ್.ರೆಡ್ಡಿ, ಐ.ಪಿ.ಎಸ್., ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

- ಕಬ್ಬನ್‌ಪೇಟೆ ರಸ್ತೆಯಲ್ಲಿ, ಪಶ್ಚಿಮ ದಿಕ್ಕಿನ ಅವೆನ್ಯೂ ರಸ್ತೆ ಜಂಕ್ಷನ್‌ನಿಂದ ಪೂರ್ವ ದಿಕ್ಕಿನ ಎನ್.ಆರ್. ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಎರಡೂ ಬದಿಗಳಲ್ಲಿ ಎಲ್ಲಾ ಮಾದರಿಯ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕವನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಸಂಚಾರಿ ಪೊಲೀಸ್ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ : 31–12–2014 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ : 30–12–2014 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

P.R. 324
SC-10

**ಎಂ.ಎನ್. ರೆಡ್ಡಿ,**
ಪೊಲೀಸ್ ಕಮೀಷನರ್
ಬೆಂಗಳೂರು ನಗರ

## ಪೊಲೀಸ್ ಕಮೀಷನ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

**ಉಪಸ್ಥಿತರು :** **ಎಂ.ಎನ್. ರೆಡ್ಡಿ, ಐಪಿಎಸ್**
ಪೊಲೀಸ್ ಕಮೀಷನರ್
ಬೆಂಗಳೂರು ನಗರ

**ವಿಷಯ :** ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿ ಪ್ರದೇಶದ ಪ್ರೀ ನರ್ಸರಿ ಶಾಲೆ, ನರ್ಸರಿ ಶಾಲೆ, ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ ಮತ್ತು ಪ್ರೌಢ ಶಾಲಾ ಮಕ್ಕಳ ಸುರಕ್ಷತಾ ದೃಷ್ಟಿಯಿಂದ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಮಾರ್ಗಸೂಚಿಗಳು

**ಪ್ರಸ್ತಾವನೆ :**

ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿ ಪ್ರದೇಶದ ಪ್ರೀ ನರ್ಸರಿ ಶಾಲೆ, ನರ್ಸರಿ ಶಾಲೆ, ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ ಮತ್ತು ಪ್ರೌಢ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಸಮಸ್ತ ವಿದ್ಯಾರ್ಥಿಗಳ ಅದರಲ್ಲೂ ವಿಶೇಷವಾಗಿ ವಿದ್ಯಾರ್ಥಿನಿಯರ ಸುರಕ್ಷತಾ ಹಿತದೃಷ್ಟಿಯಿಂದ ಅತೀ

ಅವಶ್ಯಕವೆಂದು ಕಂಡು ಬಂದ ಕಾರಣ ಕರ್ನಾಟಕ ಪೊಲೀಸ್ ಕಾಯ್ದೆ ಕಲಂ 65(ಡಿ) ಮತ್ತು ಕಲಂ 70 ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಎನ್. ರೆಡ್ಡಿ, ಐಪಿಎಸ್, ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಆದ ನಾನು ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿ ಪ್ರದೇಶದ ಪ್ರೀ ನರ್ಸರಿ ಶಾಲೆ, ನರ್ಸರಿ ಶಾಲೆ, ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ ಮತ್ತು ಪ್ರೌಢ ಶಾಲೆಗಳ ಶಿಕ್ಷಣ ಸಂಸ್ಥೆಗಳ ಶಾಲಾ ಮಕ್ಕಳ ಸುರಕ್ಷತಾ ದೃಷ್ಟಿಯಿಂದ ಶಾಲಾ ಆಡಳಿತ ಮಂಡಳಿ ಮತ್ತು ಶಾಲಾ ಮುಖ್ಯಸ್ಥರು ಈ ಕೆಳಕಂಡ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸುವಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ : 157/ಎಂಎಜಿ(1)/ಇತರೆ/2014, ದಿನಾಂಕ : 26–07–2014.**

**ಮಕ್ಕಳ ಸುರಕ್ಷತಾ ದೃಷ್ಟಿಯಿಂದ ಕೈಗೊಳ್ಳಬೇಕಾದ ಕ್ರಮಗಳು**

(1) (ಎ) ಶಾಲಾ ವಾಹನಗಳು ಖಾಸಗಿಯವರ ನಿರ್ವಹಣೆಯಲ್ಲಿದ್ದು, ಪ್ರತಿ ವಾಹನದಲ್ಲಿ ಮಕ್ಕಳ ಪಿಕಪ್ ಮತ್ತು ಡ್ರಾಪ್ ಮಾಡುವವರೆಗೂ ಶಾಲಾ ವತಿಯಿಂದ ಒಬ್ಬ ಜವಾಬ್ದಾರಿಯುತ ಪುರುಷ ಮತ್ತು ಮಹಿಳಾ ಸಿಬ್ಬಂದಿಯವರನ್ನು ಕಡ್ಡಾಯವಾಗಿ ನಿಯೋಜಿಸಬೇಕು. ಸಾರಿಗೆ ಇಲಾಖೆಯಿಂದ ನಿಗದಿ ಪಡಿಸಿರುವ ಸೀಟುಗಳಿಗಿಂತ ಹೆಚ್ಚಿನ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಬಾರದು, ಪ್ರತಿ ಶಾಲಾ ವಾಹನಕ್ಕೆ ಕಡ್ಡಾಯವಾಗಿ GPS ಅಳವಡಿಸಿರತಕ್ಕದ್ದು ಹಾಗೂ GPS ವ್ಯವಸ್ಥೆಯು ಸದಾ ಚಾಲ್ತಿ ಇರುವಂತೆ ನೋಡಿಕೊಳ್ಳತಕ್ಕದ್ದು, ವಾಹನ ಚಾಲಕರ ಚಾಲ್ತಿಯಲ್ಲಿರುವ ಚಾಲನ ಪರವಾನಿಗೆ ಹೊಂದಿರುವುದನ್ನು ಖಾತರಿ ಪಡಿಸಿಕೊಳ್ಳುವುದು ಮತ್ತು ಚಾಲಕನ ಪೂರ್ವಾಪರ ನಡೆತೆಯ ಬಗ್ಗೆ ಸರಹದ್ದಿನ ಪೊಲೀಸ್ ಠಾಣೆಯಿಂದ ವರದಿ ಪಡೆದುಕೊಳ್ಳತಕ್ಕದ್ದು.

(ಬಿ) ಪ್ರತಿ ಶಾಲಾ ವಾಹನದಲ್ಲಿ ಸಿಸಿಟಿವಿ ಯನ್ನು ಕಡ್ಡಾಯವಾಗಿ ಅಳವಡಿಸಿ, ಈ ವ್ಯವಸ್ಥೆಯು ಸದಾ ಚಾಲ್ತಿಯಲ್ಲಿರುವಂತೆ ಏರ್ಪಾಡು ಮಾಡತಕ್ಕದ್ದು.

(2) ಶಾಲಾ ವಾಹನದ ಚಾಲಕರ ಯಾವುದೇ ರೀತಿಯ ತಪ್ಪುಗಳ, ಕಾನೂನಿನ ನೀತಿ ನಿಯಮಗಳ ಉಲ್ಲಂಘನೆಗಳಿಗೆ ಸಂಬಂಧಿಸಿದಂತೆ, ವಾಹನದ ಮಾಲೀಕರೇ ಸಂಪೂರ್ಣ ಹೊಣೆಗಾರರಾಗಬೇಕೆಂದು, ಶಾಲಾ ಆಡಳಿತ ಮಂಡಳಿಯವರು ಖಾಸಗಿ ವಾಹನ ಮಾಲೀಕರೊಂದಿಗೆ ಲಿಖಿತ ಒಪ್ಪಂದ ಮಾಡಿಕೊಳ್ಳಬೇಕು. ವಾಹನಗಳಿಗೆ ಸಂಬಂಧಿಸಿದಂತೆ ಆರ್.ಸಿ. ಐ.ಸಿ.ಎಫ್.ಸಿ. ಮತ್ತು ಟ್ಯಾಕ್ಸ್ ಕಾರ್ಡ್‌ಗಳ ಮಾನ್ಯತೆ ಹೊಂದಿರತಕ್ಕದ್ದು.

(3) ಶಾಲಾ ಬಸ್ಸುಗಳು ಮತ್ತು ಇತರೆ ವಾಹನಗಳ ಚಾಲಕರುಗಳು ಅವರವರ ವಾಹನಗಳಲ್ಲಿಯೇ ಇರುವಂತೆಯೂ, ಅನಗತ್ಯವಾಗಿ ಶಾಲೆಯಲ್ಲಿ ಎಲ್ಲೆಂದರಲ್ಲಿ ತಿರುಗಾಡದಂತೆಯೂ, ವಿಶೇಷವಾಗಿ ಶಾಲಾ ಮಕ್ಕಳೊಂದಿಗೆ ಅನಗತ್ಯವಾಗಿ ಮಾತನಾಡುವುದಾಗಲಿ ಅಥವಾ ಇನ್ನಿತರೆ ಚಟುವಟಿಕೆಗಳಲ್ಲಿ ತೊಡಗುವುದಾಗಲಿ ಅದರಲ್ಲೂ ಶಾಲಾ ಮಕ್ಕಳ ಮಾನ ಗೌರವಗಳಿಗೆ ಧಕ್ಕೆ ಉಂಟಾಗುವ ರೀತಿಯಲ್ಲಿ ವರ್ತಿಸದಂತೆಯೂ ಶಾಲಾ ಆಡಳಿತದವರು ಸೂಕ್ತ ಎಚ್ಚರಿಕೆ ವಹಿಸತಕ್ಕದ್ದು.

(4) ಶಾಲೆಯ ಆಟದ ಮೈದಾನ, ಈಜುಕೊಳ, ಪ್ರಯೋಗ ಶಾಲೆ, ಲೈಬ್ರರಿ, ಡ್ಯಾನ್ಸಿಂಗ್ ಹಾಲ್, ವ್ಯಾಯಾಮ ಶಾಲೆ ಮುಂತಾದ ಸ್ಥಳಗಳಲ್ಲಿ ಆಯಾ ವಿಷಯಗಳಿಗೆ ಸಂಬಂಧಪಟ್ಟ ಶಿಕ್ಷಕರು/ಮೇಲ್ವಿಚಾರಕರು ಮಾತ್ರವೆ ಹಾಜರು ಇರುವಂತೆಯೂ ಅನಗತ್ಯವಾಗಿ ಸಂಬಂಧಪಡದ ಇನ್ನಿತರೆಯವರು ಆ ಸ್ಥಳಗಳಿಗೆ ಪ್ರವೇಶಿಸದಂತೆಯೂ ಎಚ್ಚರಿಕೆ ವಹಿಸತಕ್ಕದ್ದು.

(5) ಶಾಲೆಯ ನೆಲ ಅಂತಸ್ತು ಮತ್ತು ಮಹಡಿ ಅಂತಸ್ತುಗಳು ಇದ್ದಲ್ಲಿ ಪ್ರತಿ ಅಂತಸ್ತಿಗೆ ಒಬ್ಬರಂತೆ "FLOOR VIGILANCE OFFICER" ಗಳನ್ನು (ಸಾಧ್ಯವಾದರೆ ಮಹಿಳಾ ಶಿಕ್ಷಕಿಯರು/ಮಹಿಳಾ ಹಿರಿಯ ಸಿಬ್ಬಂದಿವರ್ಗದವರು) ನೇಮಿಸುವುದು, ಈ F.V.O. ಗಳಿಗೆ ಆಯಾ ಅಂತಸ್ತಿನಲ್ಲಿ ಪಾರದರ್ಶಕವಾದ ಪುಟ್ಟ "ಗಾಜಿನ ಚೌಕಿ" ಗಳನ್ನು ನಿರ್ಮಿಸಿ ಅಲ್ಲಿಂದ ಎಲ್ಲಾ ದಿಕ್ಕುಗಳಲ್ಲಿ ನಡೆಯುವ ಚಟುವಟಿಕೆಗಳ ಬಗ್ಗೆ ಗಮನ ಹರಿಸುವಂತೆ ಸೂಕ್ತ ವ್ಯವಸ್ಥೆ ಮಾಡುವುದು. ಈ F.V.O. ಗಳು ಆಯಾ ಅಂತಸ್ತಿನಲ್ಲಿ Routine ಚಟುವಟಿಕೆಗಳನ್ನು ಹೊರತುಪಡಿಸಿ ಯಾರಾದರೂ ವ್ಯಕ್ತಿಗಳ ವಿಶೇಷ ಚಲನವಲನ/ಅಥವಾ ಅಪರೂಪದ ಚಟುವಟಿಕೆಗಳು ಕಂಡು ಬಂದರೆ ಅಂತಹವರ ಮೇಲೆ ನಿಗಾ ವಹಿಸಿ ಸೂಕ್ತ ಎಚ್ಚರಿಕೆ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

(6) ಶಾಲೆಯ ಆವರಣ ಹಾಗೂ ಕಟ್ಟಡನವನ್ನೊಳಗೊಂಡಂತೆ ಸಮಗ್ರ ಅಧ್ಯಯನ ನಡೆಸಿ ಸೂಕ್ತ ಮತ್ತು ಆಯಕಟ್ಟಿನ ಸ್ಥಳಗಳಲ್ಲಿ ಸಿ.ಸಿ.ಟಿವಿ ಕ್ಯಾಮೆರಗಳನ್ನು ಅಳವಡಿಸಿ, ಅವುಗಳು ಸದಾ ಚಾಲ್ತಿಯಲ್ಲಿರುವಂತೆಯೂ ಹಾಗೂ ಇವುಗಳ ನಿಗಾ ಮತ್ತು ನಿರ್ವಹಣೆಗೆ ಸೂಕ್ತ ಸಿಬ್ಬಂದಿಯನ್ನು ನೇಮಿಸಿ ಏನಾದರು ಅಪರೂಪದ ಹಾಗೂ ವಿಶೇಷ ಪ್ರಸಂಗಗಳು ಕಂಡು ಬಂದಲ್ಲಿ ಕೂಡಲೇ ಆಡಳಿತ ಮಂಡಳಿಯವರ ಮತ್ತು ಸ್ಥಳೀಯ ಪೊಲೀಸ್ ಠಾಣೆಯ ಗಮನಕ್ಕೆ ತರುವಂತೆಯೂ ಮತ್ತು ಸಿಸಿಟಿವಿ ಫುಟೇಜ್‌ಗಳನ್ನು ಕನಿಷ್ಠ 60 ದಿನಗಳ ಅವಧಿಗೆ ಸಂರಕ್ಷಿಸಿಟ್ಟು ಅಗತ್ಯ ಬಿದ್ದಾಗ ವಿಚಾರಣೆಯ ಸಲುವಾಗಿ ತನಿಖಾಧಿಕಾರಿಗಳಿಗೆ ಒದಗಿಸತಕ್ಕದ್ದು.

(7) (ಎ) ಮಕ್ಕಳ ಪೋಷಕರಿಗೆ ಗುರ್ತಿನ ಚೀಟಿ ನೀಡಬೇಕು ಆ ಗುರ್ತಿನ ಚೀಟಿಯಲ್ಲಿ ಅವರ ಮಕ್ಕಳ ಭಾವಚಿತ್ರವಿರುವಂತೆ ಗುರ್ತಿನ ಚೀಟಿ ನೀಡುವ ವ್ಯವಸ್ಥೆ ಮಾಡತಕ್ಕದ್ದು.

(ಬಿ) ಪ್ರತಿ ಮಕ್ಕಳ ಪೋಷಕರು ಶಾಲೆಯ ಆಡಳಿತ ಮಂಡಳಿಗೆ ತಮ್ಮ ನಿಗದಿತ ಒಂದು ಸೆಲ್ ಪೋನ್ ನಂಬರ್ ಅನ್ನು ನೀಡಿ ಶಾಲೆಯಲ್ಲಿ ಆ ನಂಬರ್‌ನ್ನು ನೋಂದಾಯಿಸಿ ತುರ್ತು ಸಂದರ್ಭಗಳಲ್ಲಿ ಪೋಷಕರ ನಿಗದಿತ ಸೆಲ್ ನಂಬರ್‌ನಿಂದ ಬರುವ ಕರೆ ಅಥವಾ ಎಸ್.ಎಂ.ಎಸ್.ಗೆ ಮಾತ್ರವೇ ಸ್ಪಂದಿಸತಕ್ಕದ್ದು ಎಂಬ ವ್ಯವಸ್ಥೆಯನ್ನು ಜಾರಿಗೆ ತಂದು ಈ ಮಾಹಿತಿಯನ್ನು ಎಲ್ಲಾ ಪೋಷಕರುಗಳ ಗಮನಕ್ಕೆ ತರುವುದು ಮತ್ತು ಶಾಲೆಯ ಆಡಳಿತ ಮಂಡಳಿಯ ನಿರ್ವಾಹಕರಿಗೆ ಸೂಕ್ತ ಸೂಚನೆಗಳನ್ನು ನೀಡುವುದು.

(8) ಶಾಲಾ ಶಿಕ್ಷಕ ಸಿಬ್ಬಂದಿ ವರ್ಗ, ಆಡಳಿತ ಸಿಬ್ಬಂದಿ ವರ್ಗ, ಭದ್ರತಾ ಸಿಬ್ಬಂದಿ ವರ್ಗ, ಅಟೆಂಡರ್/ದಲಾಯತ್ ವರ್ಗದವರ ಕ್ರೆಡಿನ್ಷಿಯಲ್ಸ್ ಮತ್ತು ಆಂಟಿಸಿಡೆಂಟ್ಸ್ ಅನ್ನು ಪೊಲೀಸ್ ಇಲಾಖೆ ವ್ಯವಸ್ಥೆ ಮೂಲಕ ಮಾಡಿಸಿ ಎಲ್ಲಾರಿಗೂ ಶಾಲೆಯ ಅಧಿಕೃತ ಗುರ್ತಿನ ಚೀಟಿ ನೀಡಿ ಕರ್ತವ್ಯದ ಸಮಯದಲ್ಲಿ ಕಡ್ಡಾಯವಾಗಿ ಧರಿಸುವಂತೆ ಆದೇಶಿಸತಕ್ಕದ್ದು.

(9) ಪ್ರತಿ ಶಾಲೆಗೆ ಅಗತ್ಯಕ್ಕೆ ತಕ್ಕಂತೆ a) Access Control @ gates of the school, b) At each floor for floor vigilance, c) Women Security personnel & d) Night Shift Security ಕರ್ತವ್ಯಗಳ ಸಲುವಾಗಿ ಭದ್ರತಾ ಸಿಬ್ಬಂದಿಗಳನ್ನು ಬೆಳಿಗ್ಗೆ ಮತ್ತು ಮಧ್ಯಾಹ್ನದ

ಪಾಳಿಗಳಲ್ಲಿ ಹಾಗೂ ರಾತ್ರಿ ಕರ್ತವ್ಯಕ್ಕೆ ನೇಮಿಸಿ ಶಾಲಾ ಕರ್ತವ್ಯದ ಅವಧಿಯಲ್ಲಿ ಪ್ರತಿ ಎರಡು ಘಂಟೆಗಳಿಗೊಮ್ಮೆ ಶಾಲಾ ಭದ್ರತಾ ಸಿಬ್ಬಂದಿ ವರ್ಗದವರು ಅವರವರ ಸೆಕ್ಟರ್‌ನ ಉಸ್ತುವಾರಿ ನಿರ್ವಹಿಸಿ ಭದ್ರತಾ ಮುಖ್ಯಸ್ಥ ಅಧಿಕಾರಿಗೆ ಎಲ್ಲವೂ ಸುರಕ್ಷಿತವಾಗಿದೆ ಎಂದು ವರದಿ ನೀಡತಕ್ಕದ್ದು. (ಸಾಮಾನ್ಯವಾಗಿ ಪಾಳಿಯೆಂದರೆ : ಬೆಳಿಗ್ಗೆ 8.00 ಗಂಟೆಯಿಂದ ಮಧ್ಯಾಹ್ನ 2.00 ಗಂಟೆ ಮಧ್ಯಾಹ್ನ 2.00 ಗಂಟೆಯಿಂದ ರಾತ್ರಿ 8.00 ಗಂಟೆಗೆ ಹಾಗೂ ರಾತ್ರಿ ಕಾವಲಿಗೆ) ಭದ್ರತಾ ಉಸ್ತುವಾರಿಗಾಗಿ 3 Security Superviors + 1 Chief Supervisor ನ್ನು ನೇಮಿಸತಕ್ಕದ್ದು.

ಶಾಲೆಯ ಸಮಸ್ತ ವಿದ್ಯಾರ್ಥಿ ಸಮೂಹದ ಸುರಕ್ಷತೆಯ ದೃಷ್ಟಿಯಿಂದ ಕಲಂ–31, ಕರ್ನಾಟಕ ಪೊಲೀಸ್ ಕಾಯ್ದೆ ಅನ್ವಯ ಮೇಲ್ಕಂಡ ಸೂಚನೆಗಳನ್ನು ನೀಡಲಾಗಿದ್ದು, ಸದರಿ ಸುರಕ್ಷತಾ ಕ್ರಮಗಳನ್ನು ದಿನಾಂಕ : 31–08–2014 ರೊಳಗೆ ತಪ್ಪದೇ ಜಾರಿಗೆ ತರತಕ್ಕದ್ದು.

ಮೇಲ್ಕಂಡ ಯಾವುದೇ ಸೂಚನೆಯ ಉಲ್ಲಂಘನೆ ಕಂಡು ಬಂದಲ್ಲಿ ಶಾಲೆಯ ಆಡಳಿತ ಮಂಡಳಿ ಹಾಗೂ ಆಡಳಿತ ನಿರ್ವಾಹಕರ ಮೇಲೆ ಕಲಂ–188 ಭಾರತೀಯ ದಂಡ ಸಂಹಿತೆ ಅನ್ವಯ ಸೂಕ್ತ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲಾಗುವುದು.

ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಈ ಆದೇಶವನ್ನು ದಿನಾಂಕ : 26ನೇ ಜುಲೈ, 2014 ರಂದು ಹೊರಡಿಸಲಾಗಿದೆ.

**P.R. 328**

**ಎಂ.ಎನ್. ರೆಡ್ಡಿ,**
ಪೊಲೀಸ್ ಕಮೀಷನರ್
ಬೆಂಗಳೂರು ನಗರ

## ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಹೊಸ ಸಾರ್ವಜನಿಕ ಕಛೇರಿಗಳು, ನೃಪತುಂಗ ರಸ್ತೆ, ಬೆಂಗಳೂರು

## ಅಧಿಕೃತ ಜ್ಞಾಪನ

### ಸಂಖ್ಯೆ : ಸಿ2(5) ದೂರು 23/2013–14, ದಿನಾಂಕ : 10–09–2014

**ವಿಷಯ :** ಶ್ರೀ ಹನುಮಂತು ಸಿ. ಉಪ ಪ್ರಾಂಶುಪಾಲರು, ಸ.ಪ.ಪೂ. ಕಾಲೇಜು (ಪ್ರೌಢ ಶಾಲಾ ವಿಭಾಗ) ಆನವಟ್ಟಿ ಸೊರಬ ತಾಲ್ಲೂಕು ಇವರ ಕರ್ತವ್ಯ ನಿರ್ಲಕ್ಷತೆ–ಶಿಸ್ತು ಕ್ರಮ

**ಉಲ್ಲೇಖ :**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್, ಶಿವಮೊಗ್ಗ ರವರ ಪತ್ರ ಸಂಖ್ಯೆ : ಜಿಪಂಶ : ಸಿಬ್ಬಂದಿ(6): ಸಿಆರ್: 16/ 2012–13, ದಿನಾಂಕ :21–11–2012.
2. ಉಪ ನಿರ್ದೇಶಕರು, ಸಾ.ಶಿ. ಇಲಾಖೆ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಪತ್ರ ಸಂಖ್ಯೆ : ಇ1:ಮು.ಶಿ.ದೂರು/49/2012–13, ದಿನಾಂಕ : 9–7–2013
3. ಉಪ ನಿರ್ದೇಶಕರು ಸಾ.ಶಿ. ಇಲಾಖೆ ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ರವರ ಪತ್ರ ಇ1:ಮು.ಶಿ.ದೂರು/49/ 2012–13, ದಿನಾಂಕ : 7–11–2013.
4. ಈ ಕಛೇರಿ ಪತ್ರ ಸಮ ಸಂಖ್ಯೆ : ದಿನಾಂಕ : 14–3–2014.
5. ಸರ್ಕಾರದ ಪತ್ರ ಸಂಖ್ಯೆ : ಇಡಿ 373 ಎಸ್‌ಇಎಸ್ 2014, ದಿನಾಂಕ : 04–07–2014.

**ಪ್ರಸ್ತಾವನೆ :–**

ಶ್ರೀ ಹನುಮಂತು ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರು ಖಾಯಂ ಪೂರ್ವ ಸೇವಾ ಅವಧಿಯಲ್ಲಿರುವಾಗಲೇ ದಿನಾಂಕ : 18–09–2012 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದಲ್ಲದೆ, ಸರ್ಕಾರದ ಹಣ ರೂ. 7,32,680/–ಗಳನ್ನು ದುರುಪಯೋಗಪಡಿಸಿಕೊಂಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಶಿವಮೊಗ್ಗ ಜಿಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳು ದಿನಾಂಕ : 08–11–2012 ರಂದು ಶಾಲೆಗೆ ಭೇಟಿ ನೀಡಿ ಶಾಲಾ ದಾಖಲೆಗಳನ್ನು ಪರಿಶೀಲಿಸಿದಾಗ, ಶ್ರೀ ಹನುಮಂತು. ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು ಶಿವಮೊಗ್ಗ ಜಿಲ್ಲೆ, ಇವರ ಕರ್ತವ್ಯ ಲೋಪ, ಕರ್ತವ್ಯನಿರ್ಲಕ್ಷ್ಯ, ಬೇಜವಾಬ್ದಾರಿ. ಅನಧಿಕೃತ ಗೈರು ಹಾಜರಿ ಹಾಗೂ ಹಣದುರುಪಯೋಗ ಮಾಡಿರುವುದು ಕಂಡುಬಂದಿರುತ್ತದೆ. ಈ ಬಗ್ಗೆ ಶಿವಮೊಗ್ಗ ಜಿಲ್ಲಾ ಉಪನಿರ್ದೇಶಕರು ಸರ್ಕಾರದ ಸುತ್ತೋಲೆ ಸಂಖ್ಯೆ : ಇಡಿ 80 ಡಿಜಿಒ 2005, ದಿನಾಂಕ : 30–06–2005ರನ್ವಯ ಶ್ರೀ ಹನುಮಂತು. ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು ಶಿವಮೊಗ್ಗ ಜಿಲ್ಲೆ, ಇವರನ್ನು ಅಮಾನತ್ತಿನಲ್ಲಿಡುವುದು ಸೂಕ್ತವೆಂದು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್, ಶಿವಮೊಗ್ಗ ರವರು ವರದಿಯನ್ನು ಸಲ್ಲಿಸಿರುತ್ತಾರೆ. ಉಪನಿರ್ದೇಶಕರ ವರದಿಯನ್ನು ಆಧರಿಸಿ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್, ಶಿವಮೊಗ್ಗ ರವರು ಉಲ್ಲೇಖ (1)ರಲ್ಲಿ ಕಾಣಿಸಿದ ಆದೇಶದ ಮೂಲಕ ಕರ್ನಾಟಕ ನಾಗರೀಕ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) 1957ರ ನಿಯಮ 10(1)(ಎ) ರಂತೆ ಶ್ರೀ ಹನುಮಂತು ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರನ್ನು ದಿನಾಂಕ : 21–11–2012 ರಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿರುತ್ತಾರೆ. ಮುಂದುವರಿದು ಶ್ರೀ ಹನುಮಂತು ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರದ ಹಣ ದುರುಪಯೋಗಪಡಿಸಿಕೊಂಡಿರುವ ಅಂಶಕ್ಕೆ ಸಂಬಂಧಿಸಿದಂತೆ ಸದರಿಯವರ ಮೇಲೆ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರು ಕ್ರಿಮಿನಲ್ ಮೊಕದ್ದಮೆ ದಾಖಲಿಸುವಂತೆ ಆದೇಶಿಸಿದ್ದು, ಶಿವಮೊಗ್ಗ ಜಿಲ್ಲಾ ಉಪನಿರ್ದೇಶಕರು ಈ ಕುರಿತು ಆನವಟ್ಟಿ ಪೊಲೀಸ್ ಠಾಣೆಯಲ್ಲಿ ದಿನಾಂಕ : 05–12–2012ರಲ್ಲಿ ದೂರು ದಾಖಲಿಸಿರುತ್ತಾರೆ ಹಾಗೂ ಅದೇ ದಿನ ಪೊಲೀಸ್ ಸಬ್ ಇನ್ಸ್ ಪೆಕ್ಟರ್‌ರವರು ಆರೋಪಿತ ಅಧಿಕಾರಿಯನ್ನು ದಸ್ತಗಿರಿ ಮಾಡಿ ಸೊರಬ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಹಾಜರುಪಡಿಸಿದ್ದು, ನ್ಯಾಯಾಲಯವು 14 ದಿನಗಳ ಅವಧಿಗೆ ನ್ಯಾಯಾಂಗ ಬಂಧನಕ್ಕೆ ಆದೇಶಿಸಿರುತ್ತದೆ.

ಶ್ರೀ ಹನುಮಂತು ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರು ದಿನಾಂಕ : 19–07–2010ರಂದು ಪ್ರಥಮವಾಗಿ ಸರ್ಕಾರಿ ಸೇವೆಗೆ ಸೇರಿದ್ದು ಈ ವರೆವಿಗೂ ಸದರಿಯವರ ಖಾಯಂ ಪೂರ್ವ ಸೇವಾವಧಿಯನ್ನು ತೃಪ್ತಿಕರವೆಂದು ಘೋಷಿಸಲಾಗಿಲ್ಲ. ಖಾಯಂ ಪೂರ್ವ ಸೇವಾ ಅವಧಿಯಲ್ಲಿರುವಾಗಲೇ ಶ್ರೀ ಹನುಮಂತು ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರು ಅನಧಿಕೃತ ಗೈರು ಹಾಜರಿ, ಕರ್ತವ್ಯ ನಿರ್ಲಕ್ಷತೆ, ಸರ್ಕಾರದ ಹಣ ದುರುಪಯೋಗ ಮುಂತಾದ ಗಂಭೀರವಾದ ದುರ್ನಡತೆಗಳನ್ನೆಸಗಿರುವ ಹಿನ್ನೆಲೆಯಲ್ಲಿ ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವುದು ಅಗತ್ಯವಾಗಿದ್ದು, ಶ್ರೀ ಹನುಮಂತು ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರು ಗ್ರೂಪ್ 'ಬಿ' ಅಧಿಕಾರಿಯಾಗಿದ್ದು, ಗ್ರೂಪ್ ಬಿ ಅಧಿಕಾರಿಗಳಿಗೆ ಆಯುಕ್ತರು ನೇಮಕಾತಿ ಪ್ರಾಧಿಕಾರಿಗಳಾಗಿರುವ ಹಿನ್ನೆಲೆಯಲ್ಲಿ ಸದರಿಯವರ ಮೇಲೆ ಶಿಸ್ತು ಕ್ರಮ ಕೈಗೊಳ್ಳುವಂತೆ ಶಿವಮೊಗ್ಗ ಜಿಲ್ಲಾ ಉಪನಿರ್ದೇಶಕರು ದಿನಾಂಕ : 09–07–2013 ರಲ್ಲಿ ಆಯುಕ್ತರಿಗೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಅಧಿಕಾರಿ ಇನ್ನೂ ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಇರುವಾಗಲೇ ಕರ್ತವ್ಯ ನಿರ್ಲಕ್ಷತೆ ತೋರಿರುವುದರಿಂದ ಸದರಿಯವರ ಮೇಲೆ KARNATAKA CIVIL SERVICES (PROBATION) RULES, 1977 ರಡಿ ಕ್ರಮ ಕೈಗೊಳ್ಳುವುದು ಸೂಕ್ತವೆಂದು ಭಾವಿಸಿ ಸರ್ಕಾರಕ್ಕೆ ದಿನಾಂಕ : 14–03–2014 ರಲ್ಲಿ ವರದಿ ಮಾಡಲಾಗಿತ್ತು. ಸರ್ಕಾರದ ಪತ್ರ ಸಂಖ್ಯೆ : ಇಡಿ 373 ಎಸ್‌ಇಎಸ್ 2014, ದಿನಾಂಕ : 04–07–2014ರಲ್ಲಿ KARNATAKA CIVIL SERVICES (PROBATION) RULES, 1977 ನಿಯಮ–5,6,7ರ ಅನುಸಾರ ದುರ್ನಡತೆಗಾಗಿ ಸೇವೆಯಿಂದ ತೆಗೆದುಹಾಕಲು ಹಾಗೂ ಸದರಿ ಆರೋಪಿತ ಅಧಿಕಾರಿ ಸರ್ಕಾರದ ಹಣ ರೂ. 7,32,680/–ನ್ನು ದುರುಪಯೋಗ ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ಹಿನ್ನೆಲೆಯಲ್ಲಿ ಕ್ರಿಮಿನಲ್ ದಾವೆ ದಾಖಲು ಮಾಡಿ ಆರ್ಥಿಕ ನಷ್ಟವನ್ನು ಸರ್ಕಾರಕ್ಕೆ ಭರಿಸಲು ತಿಳಿಸಿ, ಶಿಸ್ತು ಕ್ರಮ ಕೈಗೊಳ್ಳಲು ಅನುಮತಿ ನೀಡಲಾಗಿದೆ.

KARNATAKA CIVIL SERVICES (PROBATION) RULES, 1977 ರಡಿ ಕ್ರಮ ಜರುಗಿಸುವ ಪೂರ್ವದಲ್ಲಿ ಆರೋಪಿ ಅಧಿಕಾರಿಯಾಗಿರುವ ಶ್ರೀ ಹನುಮಂತು ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ದಿನಾಂಕ : 18–10–2012 ರಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಲಾಗಿದೆ.

ಮೇಲಿನ ಕಂಡಿಕೆಗಳಲ್ಲಿನ ಅಂಶಗಳನ್ನು ಪರಿಶೀಲಿಸಿದಾಗ ಶ್ರೀ ಹನುಮಂತು ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಿ ಸೇವೆಗೆ ಹಾಗೂ ಅವರು ಹೊಂದಿರುವ ಹುದ್ದೆಗೆ ಸೂಕ್ತವಾದ ಅಭ್ಯರ್ಥಿಯಲ್ಲವೆಂದೂ, ಸದರಿಯವರನ್ನು ಸರ್ಕಾರಿ ಸೇವೆಯಲ್ಲಿ ಮುಂದುವರಿಸುವುದು ಸೂಕ್ತವಲ್ಲವೆಂದು ನಿರ್ಣಯಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಆಧರಿಸಿ KARNATAKA CIVIL SERVICES (PROBATION) RULES, 1977 ನಿಯಮ–5,6,7ರ ರನ್ವಯ ಶ್ರೀ ಹನುಮಂತು ಸಿ. ಉಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಆನವಟ್ಟಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ತೆಗೆದು ಹಾಕಲಾಗಿದೆ (Discharge from service) ಸದರಿ ವಿಷಯವನ್ನು ಆರೋಪಿತ ಅಧಿಕಾರಿಯ ಸೇವಾ ಪುಸ್ತಕದಲ್ಲಿ ಕಡ್ಡಾಯವಾಗಿ ದಾಖಲಿಸತಕ್ಕದ್ದು.

**ಮೊಹಮದ್ ಮೊಹಸಿನ್**

P.R. 330

ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿಗಳು,
ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು

## ನಿರ್ದೇಶನಾಲಯ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು–1

**ಜ್ಞಾಪನ**

**ಸಂಖ್ಯೆ : ವಿನಿ/ಸಿಶಾ/ಉ.ನಿ.ಬ./871/2014–15, ದಿನಾಂಕ : 11–09–2014.**

**ವಿಷಯ :** ಶ್ರೀ ವಿಜಯಕುಮಾರ್ ಎಸ್ ಕಳ್ಳೀಮನಿ, ಜಿ.ವಿ.ಅ., ಕ.ಸ.ವಿ.ಇ., ದಾವಣಗೆರೆ, ಇವರಿಗೆ ಉಪ ನಿರ್ದೇಶಕರ ವೃಂದಕ್ಕೆ ಸ್ಥಾನಪನ್ನ ಮುಂಬಡ್ತಿ ನೀಡಿರುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ : ಆಇ/72/ಕವಿಇ/2014, ಬೆಂಗಳೂರು, ದಿನಾಂಕ : 11–09–2014.

ಶ್ರೀ ವಿಜಯಕುಮಾರ್ ಎಸ್ ಕಳ್ಳೀಮನಿ, ಜಿಲ್ಲಾ ವಿಮಾಧಿಕಾರಿಗಳು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ದಾವಣಗೆರೆ, ಇವರಿಗೆ ಉಲ್ಲೇಖದ ಸರ್ಕಾರದ ಅಧಿಸೂಚನೆಯನ್ವಯ ರೂ. 36300–53850ರ ವೇತನ ಶ್ರೇಣಿಯಲ್ಲಿ ಉಪ ನಿರ್ದೇಶಕರ ವೃಂದಕ್ಕೆ ಸ್ಥಾನಪನ್ನ ಮುಂಬಡ್ತಿ ನೀಡಿ ಉಪ ನಿರ್ದೇಶಕರು–2, ವಿಮಾ ನಿರ್ದೇಶನಾಲಯ, ಬೆಂಗಳೂರು, ಇಲ್ಲಿಗೆ ನೇಮಿಸಿ ಆದೇಶಿಸಲಾಗಿದೆ.

ಅದರಂತೆ ಸದರಿ ಅಧಿಕಾರಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಜಿಲ್ಲಾ ವಿಮಾಧಿಕಾರಿಗಳು, ದಾವಣಗೆರೆ, ಹುದ್ದೆಯ ಕರ್ತವ್ಯಗಳಿಂದ ಬಿಡುಗಡೆ ಮಾಡಿದೆ ಹಾಗೂ ಜಿಲ್ಲಾ ವಿಮಾಧಿಕಾರಿಗಳ ಹುದ್ದೆಯ ಕರ್ತವ್ಯಗಳನ್ನು ಕಛೇರಿ ಅಧೀಕ್ಷಕರಾದ ಶ್ರೀ ಹೆಚ್.ಎಂ. ಬಸವರಾಜಯ್ಯ, ಇವರಿಗೆ ವಹಿಸುವಂತೆ ಆದೇಶಿಸಿದೆ.

P.R. 258

**ನಿರ್ದೇಶಕರು**

SC-50

ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು.

## ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಕಸಂವಾ 168 ಕೆಎಂಯು 2014, ಬೆಂಗಳೂರು, ದಿನಾಂಕ : 23-09-2014**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಬಿ.ಆರ್. ಹಿಲ್ಲ್‌ಸ್‌ನಲ್ಲಿರುವ ದಿವಾನ ಪೂರ್ಣಯ್ಯ ಛತ್ರವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ 1961ರ ಕಲಂ 4(3)ರ ಅಡಿ" ರಾಜ್ಯ (ಕರ್ನಾಟಕ ಆಕ್ಟ್ ಆಫ್ 1962) ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟಿದೆ. ಈ ಉದ್ದೇಶದಿಂದ ಸದರಿ ಸ್ಮಾರಕಗಳನ್ನು ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು 60 ದಿನಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ.

ಈ ಸ್ಮಾರಕವನ್ನು ರಾಜ್ಯ ಸಂರಕ್ಷಿತ ಪ್ರದೇಶವೆಂದು ಘೋಷಿಸುವ ಬಗ್ಗೆ ಯಾವುದೇ ರೀತಿಯ ಆಕ್ಷೇಪಣೆಗಳು ಬಾಧಿತವಾದವರಿಂದ ಮೇಲ್ಕಾಣಿಸಿದ ಅವಧಿಯೊಳಗೆ ರಾಜ್ಯ ಸರ್ಕಾರವು ಸ್ವೀಕರಿಸಿದಲ್ಲಿ, ಸರ್ಕಾರವು ಅದನ್ನು ಪರಿಶೀಲಿಸುವುದು. ಈ ಸಂಬಂಧ ಕುರಿತಾದ ಆಕ್ಷೇಪಣೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ಆಡಳಿತ ಕನ್ನಡ), ವಿಕಾಸಸೌಧ, ನೆಲ ಮಹಡಿ, ಕೊಠಡಿ ಸಂಖ್ಯೆ : 2, ಬೆಂಗಳೂರು-560001 ಇವರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮಂಜುನಾಥ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, (ಆಡಳಿತ ಕನ್ನಡ).

### ಪರಿವಿಡಿ

| ಜಿಲ್ಲಾ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | ಮೇರೆಗಳು (ಚಕ್ಕಬಂದಿ) | | ಒಡೆತನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | | 8 | 9 |
| ಚಾಮರಾಜ ನಗರ ಜಿಲ್ಲೆ | ಯಳಂದೂರು | ಬಿ.ಆರ್. ಹಿಲ್ಸ್ (ಬಿಳಿಗಿರಿರಂಗನಬೆಟ್ಟ) | ದಿವಾನ್ ಪೂರ್ಣಯ್ಯ ಛತ್ರ | ಸರ್ವೇ ನಂ. 4 | 5525 ಅಡಿಗಳು | ಪೂರ್ವಕ್ಕೆ | ರಥದ ಬೀದಿ | ಮುಜರಾಯಿ ಆಡಳಿತ ವ್ಯಾಪ್ತಿಗೆ ಒಳಪಟ್ಟಿದೆ | ಈ ಛತ್ರವು ಪುರಾತನವಾಗಿದ್ದು, ಸುಮಾರು ವರ್ಷಗಳ ಹಿಂದೆ ಈ ಛತ್ರದಲ್ಲಿ ಮದುವೆಗಳು ನಡೆಯುತ್ತಿದ್ದವು ಹಾಗೂ ಜಾತ್ರೆ ಸಮಯದಲ್ಲಿ ಯಾತ್ರಿಕರು ತಂಗುತ್ತಿದ್ದರು. ಈ ಛತ್ರದ ಸಂರಕ್ಷಣೆಯನ್ನು ಇಲಾಖೆಯ ಅನುದಾನದಡಿ ಲೋಕೋಪಯೋಗಿ ಇಲಾಖೆಯ ವತಿಯಿಂದ ಕೈಗೊಂಡಿರುತ್ತಾರೆ. |
| | | | | | | ಪಶ್ಚಿಮಕ್ಕೆ : | ದೇವಸ್ಥಾನದ ಜಾಗ | | |
| | | | | | | ಉತ್ತರಕ್ಕೆ : | ದೇವಸ್ಥಾನಕ್ಕೆ ಹೋಗುವ ಜಾಗ | | |
| | | | | | | ದಕ್ಷಿಣಕ್ಕೆ : | ದೇವಸ್ಥಾನದ ಜಾಗ | | |

P.R. 259
SC-50

**ಮಂಜುನಾಥ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, (ಆಡಳಿತ ಕನ್ನಡ).

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.**

**ಸಂಖ್ಯೆ : ಎ1.71ಎ.ಅಮೊ.69/2009-10, ದಿನಾಂಕ : 21ನೇ ಜನವರಿ 2015.**

**ಉಪಸ್ಥಿತರು :** ಶ್ರೀ ಡಿ.ಎಲ್. ಗಣಪತಿ,

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ,

**ಫಿರ್ಯಾದಿ :** ವನಪಾಲಕ,

ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಅರ್ಜಿದಾರರು :** ಇಸ್ಮಾಯಿಲ್ ಬಿನ್. ಅಬ್ದುಲ್ ಸತ್ತಾರ್,

32 ವರ್ಷ, ಬಿ.ಎಲ್. ಗೌಡ ನಗರ, ಹಿರಿಯೂರು ನಗರ ಮತ್ತು ತಾಲ್ಲೂಕು ಚಿತ್ರದುರ್ಗ ಜಿಲ್ಲೆ, ಇವರ ಪರವಾಗಿ ವಿಶೇಷ ಅಧಿಕಾರ ಪತ್ರ ಪಡೆದ ಶ್ರೀ ಲಕ್ಷ್ಮಣ ಬಿನ್ ಹನುಮಂತಪ್ಪ, ಬೂದಿಗೆರೆ ಕಾಲೋನಿ, ಕುಂಚೇನಹಳ್ಳಿ ಅಂಚೆ, ಶಿವಮೊಗ್ಗ ತಾಲ್ಲೂಕು.

**ಪ್ರಸ್ತಾವನೆ :**

ದಿನಾಂಕ : 28-01-2010 ರಂದು ಒಂದು ಮಾರುತಿ ಒಮ್ನಿ ವಾಹನ ನೋಂದಣಿ ಸಂಖ್ಯೆ : ಸಿ.ಟಿ.ಎ-7811ರಲ್ಲಿ ಸಾಗುವಾನಿ ತುಂಡು ಒಟ್ಟು 04=0.273 ಎಂ3 ನ್ನು ಯಾವುದೇ ತರಹದ ರಹದಾರಿ ಇಲ್ಲದೇ ಆಯನೂರಿನಿಂದ ಶಿವಮೊಗ್ಗಕ್ಕೆ ಬರುವ ಬೆನವಳ್ಳಿ ನೀಲಗಿರಿ ನೆಡುತೋಪಿನ ಹತ್ತಿರ ಸಾಗಿಸುತ್ತಿದ್ದಾಗ, ವನಪಾಲಕರು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಸಾಗುವಾನಿ ತುಂಡುಗಳನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಮತ್ತು ಸಾಗುವಾನಿ ತುಂಡುಗಳ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ : 69/09-10 ನ್ನು ದಾಖಲು ಮಾಡಿಕೊಂಡು, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಅಸಾಮಿ ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಸಾಗುವಾನಿ ತುಂಡುಗಳ ಬಗ್ಗೆ 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿರುತ್ತಾರೆ. ಅದರಂತೆ ಸದರಿ ವಾಹನ ಮತ್ತು ಸಾಗುವಾನಿ ತುಂಡುಗಳನ್ನು ಈ ನ್ಯಾಯಾಲಯದ ಮುಂದಿನ ಆದೇಶವಾಗುವವರೆವಿಗೂ ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರ ಸುಪರ್ದಿನಲ್ಲಿ ಸುರಕ್ಷತೆಯಾಗಿ ಇಟ್ಟುಕೊಳ್ಳುವಂತೆ ಈ ಪ್ರಾಧಿಕಾರದಿಂದ ದಿನಾಂಕ : 29-01-2010 ರಂದು ಆದೇಶಿಸಲಾಗಿತ್ತು.

ಈ ಮಧ್ಯೆ ವಾಹನದ ಮೇಲೆ ಮಾಲೀಕತ್ವ ಹೊಂದಿದ ಇತರೆ ವ್ಯಕ್ತಿಗಳು ಯಾರಾದರು ಇದ್ದರೆ ಹಾಜರಾಗುವಂತೆ ಪ್ರಕಟಣೆಯನ್ನು ದಿನಾಂಕ : 16-02-2010ರ ಈ ಪತ್ರಿಕೆ ದಿನಪತ್ರಿಕೆಯಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿತ್ತು ಮತ್ತು ದಿನಾಂಕ : 13ನೇ ಮೇ 2010ರ ಭಾಗ-3, ಪುಟಸಂಖ್ಯೆ-1956ರ ಕರ್ನಾಟಕ ರಾಜ್ಯ ಪತ್ರದಲ್ಲಿಯೂ ಸಹ ಪ್ರಕಟಣೆಯನ್ನು ಪ್ರಕಟಿಸಲಾಗಿತ್ತು.

ಅನಂತರ ಈ ಪ್ರಕರಣದ ವಿಚಾರಣಾ ಹಂತದಲ್ಲಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರನ್ನು ತಿಳಿದುಕೊಳ್ಳುವ ಬಗ್ಗೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳವರಲ್ಲಿ ಪತ್ರ ವ್ಯವಹರಿಸಿದ್ದು, ಚಿತ್ರದುರ್ಗ ಸಾರಿಗೆ ಅಧಿಕಾರಿಗಳು ವಾಹನ ನೋಂದಣಿ ಸಂಖ್ಯೆ : ಸಿ.ಟಿ.ಎ. 7811 ವಾಹನದ ಬಿ ವರದಿಯನ್ನು ಕಳುಹಿಸಿದ್ದು, ಸದರಿ ವರದಿಯಲ್ಲಿ ಇಸ್ಮಾಯಿಲ್ ಬಿನ್ ಅಬ್ದುಲ್ ಸತ್ತಾರ್,ರನ್ನು ಕನ್ಸ್ಟ್ರಕ್ಷನ್ ಕಂಪನಿ, ಬಿ.ಎಲ್. ಗೌಡ ನಗರ, ಹಿರಿಯೂರು ಇವರ ಹೆಸರಿನಲ್ಲಿರುತ್ತದೆ ಎಂಬುದಾಗಿ ತಿಳಿಸಿರುತ್ತಾರೆ. ಅದರಂತೆ ಈ ಮಧ್ಯೆ ದಿನಾಂಕ : 10-03-2010 ರಂದು ಇಸ್ಮಾಯಿಲ್ ಬಿನ್ ಅಬ್ದುಲ್ ಸತ್ತಾರ್, ಬಿ.ಎಲ್. ಗೌಡ ನಗರ, ಹಿರಿಯೂರು ನಗರ ಇವರ ಪರವಾಗಿ ವಿಶೇಷ ಅಧಿಕಾರ ಪತ್ರ ಹೊಂದಿದ ಶ್ರೀ ಲಕ್ಷ್ಮಣಪ್ಪ ಬಿನ್. ಹನುಮಂತಪ್ಪ, 37 ವರ್ಷ ಬೂದಿಗೆರೆ ಕಾಲೋನಿ, ಕುಂಚೇನಹಳ್ಳಿ ಅಂಚೆ ಶಿವಮೊಗ್ಗ ತಾಲ್ಲೂಕು ಇವರು ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ, ಮಾರುತಿ ಓಮಿನಿ ವ್ಯಾನ್ ನೋಂದಣಿ ಸಂಖ್ಯೆ : ಸಿ.ಟಿ.ಎ-7811 ರ ವಾಹನದ ಮಾಲೀಕನಾಗಿದ್ದು, ಸದರಿ ವಾಹನವನ್ನು ದಿನ ನಿತ್ಯದ ಸ್ವಂತ ಉಪಯೋಗಕ್ಕಾಗಿ ಉಪಯೋಗಿಸುತ್ತಿದ್ದೇನೆ ಹಾಗೂ ಸದರಿ ವಾಹನವಿಲ್ಲದೆ ನನಗೆ ತೊಂದರೆಯಾಗಿದೆ ಹಾಗೂ ಈ ಪ್ರಕರಣದ ಬಗ್ಗೆ ನನಗೇನು ತಿಳಿದಿರುವುದಿಲ್ಲ ಆದ್ದರಿಂದ ವಾಹನವನ್ನು ನನಗೆ ಬಿಟ್ಟುಕೊಡುವಂತೆ ಇಲ್ಲವಾದಲ್ಲಿ ತುಂಬಾ ತೊಂದರೆಯಾಗುತ್ತದೆಂದು ತಿಳಿಸಿರುತ್ತಾರೆ. ಹಾಗೂ ಸದರಿ ವಾಹನವನ್ನು ಕಛೇರಿಯ ಮುಂಭಾಗದ ಆವರಣದಲ್ಲಿ ನಿಲ್ಲಿಸಿದ್ದರಿಂದ ಬಿಸಲಿಗೆ ತುಕ್ಕು ಹಿಡಿದು ವಾಹನದ ಬಿಡಿಭಾಗಗಳು ಹಾಳಾಗುವ ಸಾಧ್ಯತೆಯಿರುತ್ತದೆ ಸದರಿ ವಾಹನವಿಲ್ಲದೆ ತುಂಬಾ ಅನಾನುಕೂಲವಾಗಿರುತ್ತದೆ. ಆದ್ದರಿಂದ ಸೂಕ್ತ ಷರತ್ತನ್ನು ವಿಧಿಸಿ ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ವಾಹನ ಮಾಲೀಕರಾದ ಶ್ರೀ ಲಕ್ಷ್ಮಣ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ : 18-03-2010 ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಿದ್ದು, ಅದಕ್ಕೆ ದಿನಾಂಕ : 25-03-2010 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ ಸದರಿ ಉತ್ತರದಲ್ಲಿ, ವಾಹನ ನೋಂದಣಿ ಸಂಖ್ಯೆ : ಸಿ.ಟಿ.ಎ.-7811 ರ ವಿಶೇಷ ಅಧಿಕಾರ ಪತ್ರದ ಮುಖಾಂತರ ವಾರಸುದಾರನಾಗಿರುತ್ತೇನೆ. ನನ್ನ ವಾಹನವನ್ನು ನಾನು ದಿನನಿತ್ಯದ ಬಳಕೆಗಾಗಿ ಉಪಯೋಗಿಸುತ್ತಿದ್ದು, ಆ ದಿನ ನನಗೆ ಸೇರಿದ ನಮ್ಮ ಚಾಲಕ ಸದರಿ ವಾಹನವನ್ನು ತೆಗೆದುಕೊಂಡು ಹೋಗಿ ಆತನು ಸಹ ವಾಹನದಲ್ಲಿ ಸಾಗುವಾನಿ ತುಂಡುಗಳನ್ನು ಸಾಗಾಣಿಕೆ ಮಾಡಿರುವುದಿಲ್ಲ ಎಂದು ತಿಳಿಸಿರುತ್ತಾನೆ. ನನಗೆ ಸೇರಿದ ವಾಹನವನ್ನು ಷರತ್ತು ರಹಿತ ಅಥವಾ ಷರತ್ತಿಗೆ ಒಳಪಟ್ಟು ಬಿಟ್ಟುಕೊಡಬೇಕಾಗಿ ಪ್ರಾರ್ಥಿಸಿಕೊಂಡಿರುತ್ತಾರೆ.

ದಿನಾಂಕ : 29-03-2010ರಂದು ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ ಇವರು ಅರ್ಜಿದಾರರು ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಡಲು ಕೇಳಿದ ವಾಹನದ ಬಗ್ಗೆ ಆಕ್ಷೇಪಣೆ ಸಲ್ಲಿಸಿರುತ್ತಾರೆ. ಸದರಿ ಆಕ್ಷೇಪಣೆಯಲ್ಲಿ ವಾಹನ ನೋಂದಣಿ ಸಂಖ್ಯೆ : ಸಿ.ಟಿ.ಎ.-7811ರಲ್ಲಿ ರಹದಾರಿ ಇಲ್ಲದೇ ಅಕ್ರಮವಾಗಿ ಸಾಗುವಾನಿ ತುಂಡುಗಳನ್ನು ಸಾಗಾಣಿಕೆಯಲ್ಲಿ ನಿರತವಾಗಿರುವಾಗ ಪಿರ್ಯಾದಿದಾರರು ಸರ್ಕಾರದ ಪರ ಅಮಾನತ್ತು ಪಡಿಸಿರುವುದು ಮಹಜರ್, ಪ್ರಥಮ ವರ್ತಮಾನ ವರದಿ ಹಾಗೂ ಅಮಾನತ್ತು ವರದಿಗಳ ದಾಖಲಾತಿಯಿಂದ ತಿಳಿದು ಬಂದಿರುತ್ತದೆ. ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಿದಲ್ಲಿ ಪುನಃ ಇಂತಹ ಕೃತ್ಯಕ್ಕೆ ಉಪಯೋಗಿಸುವ ಸಾಧ್ಯತೆ ಇರುತ್ತದೆ ಹಾಗೂ ವಿಚಾರಣೆಗೆ ತೊಂದರೆ ಉಂಟಾಗುತ್ತದೆ ಹಾಗೂ ವಾಹನವನ್ನು ಗುರುತು ಸಿಗದ ಹಾಗೆ ಬದಲಾಯಿಸುವ ಹಾಗೂ ಪರಬಾರೆ ಮಾಡುವ ಸಾಧ್ಯತೆ ಇರುತ್ತದೆ. ಆದ್ದರಿಂದ ಅರ್ಜಿದಾರರ ಅರ್ಜಿಯನ್ನು ನ್ಯಾಯಾದಾನದ ದೃಷ್ಟಿಯಿಂದ ವಜಾ ಮಾಡುವಂತೆ ತಿಳಿಸಿರುತ್ತಾರೆ.

ಸದರಿ ಪ್ರಕರಣದ ದಾಖಲಾತಿಗಳನ್ನು ಹಾಗೂ ಬೆಂಗಳೂರು ಉಚ್ಚ ನ್ಯಾಯಾಲಯದ ಕ್ರಿಮಿನಲ್ ರಿವಿಶನ್ ಪಿಟಿಶನ್ ನಂ. 145/1991 (ಎಸ್.ಬಿ. ಕೆಮಿಕಲ್ಸ್ ವಿರುದ್ಧ ಅಧಿಕೃತ ಅಧಿಕಾರಿಗಳು, ಭದ್ರಾವತಿ ಇವರ ಆದೇಶ ಹಾಗೂ ಕರ್ನಾಟಕ ಅರಣ್ಯ ಕಾಯ್ದೆಯ ಸೆಕ್ಷನ್ 63 ತಿದ್ದುಪಡಿಯಾದ ಆದೇಶವನ್ನು ಪರಿಶೀಲಿಸಿ, ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ನೋಂದಣಿ ಸಂಖ್ಯೆ : ಸಿ.ಟಿ.ಎ.-7811 ನ್ನು ವಾಹನ ಮಾಲೀಕರಾದ ಶ್ರೀ ಇಸ್ಮಾಯಿಲ್ ಬಿನ್ ಅಬ್ದುಲ್ ಸತ್ತಾರ್, ಇವರ ಪರವಾಗಿ ವಿಶೇಷ ಅಧಿಕಾರ ಪತ್ರ ಪಡೆದ ಶ್ರೀ ಲಕ್ಷ್ಮಣ ಬಿನ್ ಹನುಮಂತಪ್ಪ, 37 ವರ್ಷ ಬೂದಿಗೆರೆ ಕಾಲೋನಿ, ಕುಂಚೇನಹಳ್ಳಿ ಅಂಚೆ,

ಶಿವಮೊಗ್ಗ ತಾಲ್ಲೂಕು ಇವರಿಗೆ ವಾಹನ ಮಧ್ಯಂತರ ಬಿಡುಗಡೆಗೆ ರೂ. 30,000–00 ಕ್ಕೆ ಬ್ಯಾಂಕ್ ಗ್ಯಾರಂಟಿ ಮತ್ತು ಇನ್ನಿತರ ನಿಬಂಧನೆಗೊಳಪಟ್ಟು ದಿನಾಂಕ : 19–02–2014 ರಂದು ಈ ಪ್ರಾಧಿಕಾರದಿಂದ ಆದೇಶ ಹೊರಡಿಸಲಾಗಿತ್ತು. ಸದರಿ ಆದೇಶದನ್ವಯ ಅರ್ಜಿದಾರರ ಪರ ವಕೀಲರಾಗಲೀ, ಅರ್ಜಿದಾರರಾಗಲೀ ಈ ಪ್ರಾಧಿಕಾರಕ್ಕೆ ಹಾಜರಾಗಿ ವಾಹನವನ್ನು ಮಧ್ಯಂತರ ಸುಪರ್ದಿಗೆ ಪಡೆದುಕೊಂಡಿರುವುದಿಲ್ಲ.

ಅನಂತರ ಈ ಪ್ರಾಧಿಕಾರದಲ್ಲಿ ದಿನಾಂಕ : 06–08–2014, 29–10–2014, 10–12–2014 ರಂದು ನಡೆದ ವಿಚಾರಣೆಯಲ್ಲಿ ಅರ್ಜಿದಾರರ ಪರ ವಕೀಲರು ಹಾಜರಾಗಿ ವಿಚಾರಣೆಗೆ ಸಹಕರಿಸಿರುವುದಿಲ್ಲ. ಈ ಮಧ್ಯೆ ದಿನಾಂಕ : 10–12–2014 ರಂದು ಅರ್ಜಿದಾರರ ಪರ ವಕೀಲರು ಹಾಜರಾಗಿ ಈ ಪ್ರಕರಣದಿಂದ ನಿವೃತ್ತಿಯಾಗುತ್ತೇನೆಂದು ಅರ್ಜಿಯನ್ನು ಸಲ್ಲಿಸಿರುತ್ತಾರೆ. ಸದರಿ ದಿವಸ ನಡೆದ ವಿಚಾರಣೆಯಲ್ಲಿ ಅಭಿಯೋಜನಾ ಪರ ಒಂದು ಸಾಕ್ಷ್ಯವನ್ನು ವಿಚಾರಿಸಿಕೊಂಡಿದ್ದು, ಸದರಿ ವಿಚಾರಣೆಯಲ್ಲಿ ಪ್ರಾಸಿಕ್ಯೂಷನ್ ಸಾಕ್ಷಿ 1, ಶ್ರೀ ಪಾಂಡುರಂಗ, ಉಪ ವಲಯ ಅರಣ್ಯಾಧಿಕಾರಿ, ರಿಪ್ಪನಪೇಟೆ ವಲಯ, ಅರಸಾಳು ಇವರು ತಮ್ಮ ಮುಖ್ಯ ಸಾಕ್ಷ್ಯದಲ್ಲಿ ನಾನು 2004 ರಿಂದ 2013 ರವರೆಗೆ ವನಪಾಲಕನಾಗಿ ಅರಣ್ಯ ಸಂಚಾರಿ ದಳದಲ್ಲಿ ಕರ್ತವ್ಯ ನಿರ್ವಹಿಸಿದ್ದೆ. ದಿನಾಂಕ : 28–01–2010 ರಂದು ಮೇಲಾಧಿಕಾರಿಗಳ ನಿರ್ದೇಶನದ ಮೇರೆಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಿಬ್ಬಂದಿಯವರಾದ ನಾನು ಮತ್ತು ನಾಗರಾಜ, ಆರ್.ಎನ್. ಮೂರ್ತಿ, ವೆಂಕಟೇಶ್ ಇವರೊಂದಿಗೆ ಇಲಾಖಾ ವಾಹನ ಸಂಖ್ಯೆ: ಕೆಎ–14–ಜಿ–461 ವಾಹನದಲ್ಲಿ ಸಿಬ್ಬಂದಿಯೊಂದಿಗೆ ಆಯನೂರಿನಿಂದ ಶಿವಮೊಗ್ಗಕ್ಕೆ ಗಸ್ತು ಮಾಡಿಕೊಂಡು ಬರುತ್ತಿರುವಾಗ್ಗೆ, ಒಂದು ಮಾರುತಿ ವ್ಯಾನ್ ಬರುತ್ತಿರುವುದನ್ನು ಕಂಡು ಬ್ಯಾಟರಿ ಸಹಾಯದಿಂದ ನಿಲ್ಲಿಸಲು ಸೂಚನೆ ನೀಡಿದಾಗ, ಸದರಿ ವಾಹನ ನಿಲ್ಲಿಸದೇ ವೇಗವಾಗಿ ಬೆನವಳ್ಳಿ ನೀಲಗಿರಿ ನೆಡುತೋಪಿನ ರಸ್ತೆಯಲ್ಲಿ ಚಲಿಸಿತೊಡಗಿದಾಗ, ಸದರಿ ವಾಹನವನ್ನು ಬೆನ್ನಟ್ಟಿಕೊಂಡು ಹೋದೆವು, ಸಮವಸ್ತ್ರ ಧರಿಸಿದ ಇಲಾಖಾ ಸಿಬ್ಬಂದಿಯನ್ನು ಕಂಡು ವಾಹನವನ್ನು ಅಸಾಮಿಗಳು ಬಿಟ್ಟು ನೆಡುತೋಪಿನೊಳಗೆ ಪರಾರಿಯಾದರು. ಇಲಾಖಾ ಸಿಬ್ಬಂದಿಯವರು ಎಷ್ಟೇ ಹಿಡಿಯಲು ಪ್ರಯತ್ನ ಪಟ್ಟರೂ ಅಸಾಮಿಯು ಸಿಗಲಿಲ್ಲ. ನಂತರ ವಾಹನದ ಬಳಿ ಬಂದು ಪರಿಶೀಲಿಸಿದಾಗ ಬಿಳಿ ಬಣ್ಣದ ಮಾರುತಿ ವ್ಯಾನ್ ಆಗಿದ್ದು, ನೋಂದಣಿ ಸಂಖ್ಯೆ : ಸಿ.ಟಿ.ಎ–7811 ಆಗಿರುತ್ತದೆ. ವಾಹನದೊಳಗೆ ಸಾಗುವಾನಿ ಜಾತಿಯ ಮರದ ತುಂಡುಗಳಾಗಿದ್ದು ಒಟ್ಟು 04 ತುಂಡುಗಳಿರುವುದು ಕಂಡು ಬಂದಿತು. ಅದರ ತುದಿ ಬುಡ ಗರಗಸದಿಂದ ಕೊಯ್ತ ಮಾಡಲಾಗಿದ್ದು, ಅದನ್ನು ಪರಿಶೀಲಿಸಿ ನೋಡಲಾಗಿ ಯಾವುದೇ ಇಲಾಖಾ ಛಾಪ ಗುರುತು ವಗೈರೆ ಕಂಡು ಬಂದಿರುವುದಿಲ್ಲ ಮತ್ತು ವಾಹನದಲ್ಲಿಯೂ ಸಹ ಯಾವುದೇ ದಾಖಲಾತಿಗಳು ಕಂಡು ಬಂದಿರುವುದಿಲ್ಲ. ಇದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಹಾಗೂ ಅರಣ್ಯ ಕಾಯ್ದೆ ಕಾನೂನಿಗೆ ವಿರುದ್ಧವಾದುದ್ದೆಂದು ತೀರ್ಮಾನಿಸಿ, ಸಾಗುವಾನಿ ತುಂಡುಗಳನ್ನು ಅಳತೆ ಮಾಡಿ, ಆಯಿಲ್ ಚಾಕ್‌ನಿಂದ ಕ್ರಮ ಸಂಖ್ಯೆಯನ್ನು 1 ರಿಂದ 4 ರವರೆಗೆ ಬರೆದು, ವಾಹನಕ್ಕೆ ಕ್ರಮ ಸಂಖ್ಯೆ : 5 ಎಂದು ವಾಹನದ ಗಾಜಿನ ಮೇಲೆ ಕೆಂಪು ಬಣ್ಣದಿಂದ ಎಫ್‌ಎಂಎಸ್/ಎಸ್‌ಎಂಜಿ/ಎಫ್‌ಒಸಿ. ನಂ. 69/09–10, ದಿನಾಂಕ : 28–01–2010 ಎಂದು ಹಾಗೂ ಇಲಾಖಾ ಮುದ್ರೆಯನ್ನು (ಕೆಎನ್‌ಎಫ್‌ಡಿ/ಸಿಎಸ್‌ಎಫ್/ಎಫ್/ಎಕ್ಸ್‌ಎಲ್.111) ಎಂದು ಬರೆಯಲಾಯಿತು. ನಂತರ ಜೀಪಿನ ಬ್ಯಾಟರಿ ಬೆಳಕಿನ ಮತ್ತು ಕೈ ಬ್ಯಾಟರಿಯ ಸಹಾಯದಿಂದ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಲಾಯಿತು. ಅನಂತರ ಸದರಿ ವಾಹನ ಮತ್ತು ಸಾಗುವಾನಿ ತುಂಡುಗಳ ವಿರುದ್ಧ ಅರಣ್ಯ ಮೊಕದ್ದಮೆಯನ್ನು ದಾಖಲು ಮಾಡಲಾಯಿತು. ಮೊಕದ್ದಮೆ ಸಂಖ್ಯೆ : 69/09–10, ದಿನಾಂಕ : 28–01–2010 ಆಗಿರುತ್ತದೆ. ನಂತರ ವಾಹನವನ್ನು ಸಾಗುವಾನಿ ತುಂಡಿನ ಸಮೇತ ಮುಂದಿನ ಸುರಕ್ಷತೆ ಹಾಗೂ ಕ್ರಮದ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರಲ್ಲಿ ಹಾಜರ್ ಪಡಿಸುವ ಸಲುವಾಗಿ ಶಿವಮೊಗ್ಗಕ್ಕೆ ತರಲು ತೀರ್ಮಾನಿಸಲಾಯಿತು. ಆ ದಿನ ದಾಖಲಿಸಿದ ಪ್ರಥಮ ವರ್ತಮಾನ ವರದಿಯ ಕಾರ್ಬನ್ ಪ್ರತಿಯನ್ನು ನೋಡಿದ್ದು, ಅದನ್ನು ನಿಶಾನೆ ಪಿ1 ಅದರಲ್ಲಿರುವ ಸಾಕ್ಷಿ ಸಹಿ ನಿಶಾನೆ–ಪಿ1(ಎ) ಎಂದು ಮಹಜರನ್ನು ನಿಶಾನೆ–ಪಿ2 ಎಂದು ಅದರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾನೆ–ಪಿ2(ಎ) ಎಂದು ಜಪ್ತು ವರದಿ ಕಾರ್ಬನ್ ಪ್ರತಿಯನ್ನು ನಿಶಾನೆ–ಪಿ3 ಎಂದು ಅದರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾನೆ–ಪಿ3(ಎ) ಎಂದು ಗುರುತಿಸಲಾಯಿತು. ಆ ದಿನ ಜಪ್ತು ಮಾಡಿದ ವಾಹನ ಮತ್ತು ಮುದ್ದೆಮಾಲನ್ನು ನೋಡಿದರೆ ಗುರ್ತಿಸುತ್ತೇನೆ. ಸಾಕ್ಷಿ ಗುರುತಿಸಿದ ವಾಹನವನ್ನು ಎಂಒ1 ಎಂದು ಒಟ್ಟು 04 ಸಾಗುವಾನಿ ತುಂಡುಗಳಿಗೆ ಒಟ್ಟಾರೆ ಎಂಒ–2 ಎಂದು ಗುರುತಿಸಲಾಯಿತು.

ಅನಂತರ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಮಾಲೀಕರಾದ ಶ್ರೀ ಇಸ್ಮಾಯಿಲ್ ಬಿನ್ ಅಬ್ದುಲ್ ಸತ್ತಾರ್ ಮತ್ತು ವಿಶೇಷ ಅಧಿಕಾರ ಪತ್ರ ಹೊಂದಿರುವ ಶ್ರೀ ಲಕ್ಷ್ಮಣಪ್ಪ ಬಿನ್ ಹನುಮಂತಪ್ಪ ಇವರುಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ : 10–12–2014 ಮತ್ತು 31–12–2014 ರಂದು ಎರಡು ಭಾರಿ ರಿಜಿಸ್ಟರ್ ಅಂಚೆ ಮುಖಾಂತರ ನೋಟೀಸ್ ಕಳುಹಿಸಿದ್ದು, ನೋಟೀಸ್ ನಲ್ಲಿ ತಾವು ನೇಮಿಸಿದ ವಕೀಲರು ನಿವೃತ್ತಿಯಾದ ಕಾರಣ, ತಾವಾಗಲೀ ಅಥವಾ ಬೇರೆ ವಕೀಲರನ್ನು ನೇಮಿಸಿಕೊಂಡು ಈ ಪ್ರಾಧಿಕಾರದಲ್ಲಿ ದಿನಾಂಕ : 31–12–2014 ಮತ್ತು 14–01–2015 ರಂದು ನಡೆಯುವ ವಿಚಾರಣೆಗೆ ಹಾಜರಾಗುವಂತೆ ತಿಳಿಸಿದ್ದಾಗಿರುತ್ತದೆ. ಆದರೆ, ಎರಡು ಪತ್ರಗಳನ್ನು ಶ್ರೀ ಲಕ್ಷ್ಮಣಪ್ಪ ಇವರು ಸ್ವೀಕರಿಸಿದ್ದರೂ ಸಹ ವಿಚಾರಣೆ ಹಾಜರಾಗಿರುವುದಿಲ್ಲ. ಆದರೆ ಶ್ರೀ ಇಸ್ಮಾಯಿಲ್ ಇವರಿಗೆ ಎರಡು ನೋಟೀಸ್‌ಗಳು ಜಾರಿಯಾಗದೇ No such addressee, R. Sender ಎಂಬ ಅಂಚೆ ಷರಾದೊಂದಿಗೆ ಪತ್ರ ವಾಪಸ್ಸು ಬಂದಿರುತ್ತದೆ.

ಕರ್ನಾಟಕ ಅರಣ್ಯ ಕಾಯ್ದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಯಾವುದೇ ಅರಣ್ಯ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದೆಂದು ಭಾವಿಸಬೇಕಾಗಿದ್ದು, ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತು ಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊರಬೇಕಾಗುತ್ತದೆ. ಈ ಪ್ರಕರಣದಲ್ಲಿ ಅರ್ಜಿದಾರರು ವಾಹನದ ಮಾಲೀಕರು ಪ್ರಕರಣದಲ್ಲಿ ವಶಪಡಿಸಿಕೊಂಡ ವಸ್ತುಗಳು ತಮಗೆ ಸೇರಿದೆ ಎಂಬ ಬಗ್ಗೆ ಯಾವುದೇ ದಾಖಲಾತಿಗಳನ್ನು ಹಾಜರ್ ಪಡಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಸಾಗುವಾನಿ ಸೈಜುಗಳು ಅರಣ್ಯ ಕಾಯ್ದೆ 1963 ಕಲಂ 80 ರಂತೆ ಸರ್ಕಾರದ ಸ್ವತ್ತೆಂದು ರುಜುವಾತಾಗಿರುತ್ತದೆ.

ಈ ಪ್ರಕರಣದಲ್ಲಿ ಅಭಿಯೋಜನಾ ಪರ ವಿಚಾರಿಸಿಕೊಂಡ ಸಾಕ್ಷ್ಯದ ಬಗ್ಗೆ ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಹಾಜರಾಗಿ ಅರ್ಜಿ ಸಲ್ಲಿಸಿ, ವಿಚಾರಣೆಗೆ ಸಹಕರಿಸದೆ ಇರುವುದರಿಂದ, ಪಾಟಿ ಸವಾಲು ಇಲ್ಲ ಎಂದು ತೆಗೆದುಕೊಂಡು ಏಕ ಪಕ್ಷೀಯ ನಿರ್ಣಯ ಕೈಗೊಳ್ಳಲಾಯಿತು.

ಈ ಪ್ರಕರಣದಲ್ಲಿ ಅಭಿಯೋಜನಾ ಪರ ಸಾಕ್ಷಿಯನ್ನು ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಿಸಿಕೊಂಡು ನಿಶಾನೆಗಳನ್ನು ಗುರುತಿಸಿರುತ್ತಾರೆ. ಸಾಕ್ಷಿದಾರರು ನೀಡಿರುವ ಹೇಳಿಕೆಗೂ ಹಾಗೂ ಪಂಚನಾಮೆಯಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆಯಾಗಿರುತ್ತದೆ. ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅವರು ನುಡಿದ ಸಾಕ್ಷ್ಯವು ನಂಬುವಂತಾಗಿರುತ್ತದೆ. ಇದರಿಂದ ದಿನಾಂಕ : 28–01–2010 ರಂದು ಮಾರುತಿ ವ್ಯಾನ್ ವಾಹನ ನೋಂದಣಿ ಸಂಖ್ಯೆ : ಸಿ.ಟಿ.ಎ–7811 ವಾಹನದಲ್ಲಿ ಸಾಗುವಾನಿ ತುಂಡು ಒಟ್ಟು 04=0.273 ಎಂ3ನ್ನು ಅಕ್ರಮವಾಗಿ ಸಾಗಾಣಿಕೆಯಲ್ಲಿ ನಿರತವಾಗಿರುವುದು ದೃಢಪಡುತ್ತದೆ.

ಅರ್ಜಿದಾರರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಿದಾಗ್ಯೂ ಸಹ ವಿಚಾರಣೆಗೆ ಹಾಜರಾಗಿ ಸಹಕರಿಸಿರುವುದಿಲ್ಲ. ಇದರಿಂದ ಪ್ರಕರಣದ ಬಗ್ಗೆ ಅರ್ಜಿದಾರರಿಗೆ ಯಾವುದೇ ಆಸಕ್ತಿಯು ಇಲ್ಲವೆಂದು ಸ್ಪಷ್ಟವಾಗುತ್ತದೆ. ಅರಣ್ಯ ಕಾಯ್ದೆ ಸೆಕ್ಷನ್ 71–ಎ ಪ್ರಕರಣದಲ್ಲಿ ಯಾವುದೇ ವಾಹನವು ಅಕ್ರಮ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದೆ ಎಂದು ಮೇಲ್ನೋಟಕ್ಕೆ ಅಭಿಯೋಜನೆ ಸಿದ್ದಪಡಿಸಿದ ಮೇಲೆ ವಾಹನ ಮಾಲೀಕರು ತನ್ನ ತಿಳುವಳಿಕೆ ಇಲ್ಲದೇ ಅಥವಾ ತನ್ನ ಕೈ

ಮಿರಿ ತಾನು ಎಲ್ಲಾ ಕಾಳಜಿ ವಹಿಸಿದ ನಂತರವೂ ಇಂತಹ ಅಪರಾಧದಲ್ಲಿ ಸಿಕ್ಕಿಹಾಕಿಕೊಂಡಿದೆ ಎಂದು ನಿಸ್ಸಂಶಯವಾಗಿ ಸಾಬೀತು ಪಡಿಸುವ ಸಂಪೂರ್ಣ ಬಾರ ಮಾಲೀಕರ ಮೇಲಿದ್ದು, ಮಾಲೀಕರಾಗಲೀ ಅಥವಾ ಸ್ವಾಧೀನ ಹೊಂದಿದವರಾಗಲೀ ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ತಮ್ಮ ತಿಳುವಳಿಕೆ ಬಾರದೇ ಉಪಯೋಗಿಸಲ್ಪಟ್ಟಿದೆ ಮತ್ತು ಈ ಅಕ್ರಮ ಚಟುವಟಿಕೆಗೆ ವಾಹನವನ್ನು ಉಪಯೋಗಿಸದಂತೆ ಅವಶ್ಯವಿರುವ ಎಲ್ಲಾ ಮುನ್ನೆಚ್ಚರಿಕೆಯನ್ನು ತೆಗೆದುಕೊಂಡಿದ್ದಾರೆಂದು ಸಾಕ್ಷ್ಯಾಧಾರದೊಂದಿಗೆ ವಾಹನ ಮಾಲೀಕರು ಸಾಬೀತು ಪಡಿಸಬೇಕಾಗಿದ್ದು, ವಾಹನ ಮಾಲೀಕರು ಈ ನಿಟ್ಟಿನಲ್ಲಿ ಸಂಪೂರ್ಣ ವಿಫಲರಾಗಿರುತ್ತಾರೆ.

ಈ ಸಂಬಂಧ ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಾ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಅರಣ್ಯ ಸಂಚಾರಿ ದಳ, ಶಿವಮೊಗ್ಗದ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಮೊಕದ್ದಮೆ ದಾಖಲು ಮಾಡಿರುತ್ತಾರೆ. ಮೊಕದ್ದಮೆ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುವುದರಿಂದ, ಕಾನೂನಿನ್ವಯ ಪ್ರಾಧಿಕಾರವು ಮುಂದಿನ ಕ್ರಮಕೈಗೊಳ್ಳಬಹುದೆಂದು ಮತ್ತು ಏಕಪಕ್ಷೀಯ ನಿರ್ಣಯ ಕೈಗೊಂಡು ಮುದ್ದೆಮಾಲುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ತಮ್ಮ ವಾದವನ್ನು ಮಂಡಿಸಿರುತ್ತಾರೆ.

ಅಭಿಯೋಜನಾ ಪರ ಸಾಕ್ಷ್ಯಾಧಾರವನ್ನು ಗಣನೆಗೆ ತೆಗೆದುಕೊಂಡು ದಿನಾಂಕ : 28–01–2010 ರಂದು ಸಂಖ್ಯೆ : ಸಿ.ಟಿ.ಎ.–7811 ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡಿರುವುದು ಸಂಬಂಧಪಟ್ಟ ದಾಖಲಾತಿಯಿಂದ ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಸಮಂಜಸವೆಂದು ಕಂಡು ಬಂದಿರುವುದರಿಂದ ಈ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಡಿ.ಎಲ್. ಗಣಪತಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಆದ ನಾನು, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71–ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾರುತಿ ಓಮಿನಿ ನೋಂದಣಿ ಸಂಖ್ಯೆ : ಸಿ.ಟಿ.ಎ.–7811 ಇಂಜಿನ್ ಸಂಖ್ಯೆ : ಕಂಡು ಬಂದಿರುವುದಿಲ್ಲ ಛಾಸ್ಸಿ ಸಂಖ್ಯೆ : ಎನ್.816866 ಮತ್ತು ಸಾಗುವಾನಿ ತುಂಡು ಒಟ್ಟು 04=0.273 ಎಂ3ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಮುದ್ದೆಮಾಲುಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಮುದ್ದೆಮಾಲುಗಳು ಎಲ್ಲಾ ಋಣಭಾರದಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ : 21–01–2015 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ : 21–01–2015 ರಂದು ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಿಸಿ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿ ಅನಂತರ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಡಿ.ಎಲ್. ಗಣಪತಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಅನುಬಂಧ**

**ಫಿರ್ಯಾದಿದಾರರ ಪರ ಸಾಕ್ಷಿಗಳ ವಿಚಾರಣೆ :**

1. ಶ್ರೀ ಪಾಂಡುರಂಗ, ಉಪ ವಲಯ ಅರಣ್ಯಾಧಿಕಾರಿ–ಪಿ.ಡಬ್ಲ್ಯೂ–1

**ಫಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ :**

1. ಪ್ರಥಮ ವರ್ತಮಾನ ವರದಿ–ನಿಶಾನೆ–1
2. ಸ್ಥಳ ಮಹಜರ್–ನಿಶಾನೆ–2
3. ಅಮಾನತ್ತು ವರದಿ–ನಿಶಾನೆ–3
4. ಸಿ.ಟಿ.ಎ.–7811 ಮಾರುತಿ ಓಮಿನಿ ವ್ಯಾನ್–ಎಂಒ–1
5. ಒಟ್ಟು 04=0.273 ಎಂ3 ಸಾಗುವಾನಿ ತುಂಡುಗಳು–ಎಂಒ–2

**ಅರ್ಜಿದಾರರ ಪರ ಸಾಕ್ಷಿಯ ವಿಚಾರಣೆ ಮತ್ತು ದಾಖಲಾತಿಗಳ ಪರಿಶೀಲನೆ :**

ಯಾವುದು ಇರುವುದಿಲ್ಲ.

**ಡಿ.ಎಲ್. ಗಣಪತಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**P.R. 260**

## DEPARTMENT OF COMMERCIAL TAXES

### PROCEEDINGS OF THE COMMISSIONER OF COMMERCIAL TAXES, (KARNATAKA), BENGALURU-
### CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub :** KVAT Act, 2003 - Clarification under Section 59(4) regarding the rate of tax applicable on 'Paint Brushes and other hardware accessories' -reg.

